# ಮಾನಸಿ

ತಿಂಗಳ ಪತ್ರಿಕೆ

ನವೆಂಬರ್ : 1998

* 'ಮಹಿಳಾ ಚಳುವಳಿಯ ಮಜಲುಗಳು' : ಒಂದು ಅಭಿಪ್ರಾಯ
* ಯಾರದೋ ತಪ್ಪಿಗೆ, ದ್ವೇಷಕ್ಕೆ ಹೆಣ್ಣಿನ ಮೇಲೆ ಅತ್ಯಾಚಾರವೆ?
* ಕ್ರೈಸ್ತ ಸಂನ್ಯಾಸಿನಿಯರ ಮೇಲಿನ ಗುಂಪು ಅತ್ಯಾಚಾರದ ವಿರುದ್ಧ ಮೈಸೂರಿನಲ್ಲಿ ಪ್ರತಿಭಟನೆಯ ಕಹಳೆ
* ಯುದ್ಧೋದ್ರೇಕ
* ಕೆಲಸ ಮಾಡುವ ಸ್ಥಳದಲ್ಲಿ ಲೈಂಗಿಕ ಕಿರುಕುಳ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 13 ಸಂಚಿಕೆ : 9-10

ಅಕ್ಟೋಬರ್-ನವೆಂಬರ್ : 1998



ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು

**ಈ ಸಂಚಿಕೆಯಲ್ಲಿ......**





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಬರುವ ಸಂಸತ್ ಅಧಿವೇಶನದಲ್ಲಿ ಎಲ್. ಕೆ. ಅದ್ವಾನಿಯವರು ಅತ್ಯಾಚಾರವೆಸಗಿದ ಅಪರಾಧಿಗೆ, ಮರಣದಂಡನೆ ಶಿಕ್ಷೆ ನೀಡುವಂತೆ ಅತ್ಯಾಚಾರದ ಕಾನೂನಿನಲ್ಲಿ ತಿದ್ದುಪಡಿ ತರುವುದಾಗಿ ಹೇಳಿದ್ದಾರೆ. ಗೃಹಮಂತ್ರಿಯವರು ಹೇಳಿಕೆ ನೀಡಿರುವ ಸಂದರ್ಭವನ್ನು ಮಹಿಳಾ ಸಂಘಟನೆಗಳು ಸ್ತ್ರೀಪರ ಕಾಳಜಿಯುಳ್ಳವರೆಲ್ಲಾ ಸೂಕ್ಷ್ಮವಾಗಿ ಹಾಗೂ ಗಂಭೀರವಾಗಿ ಯೋಚಿಸಬೇಕಾಗಿದೆ.

ದೇಶದಾದ್ಯಂತ ಮಹಿಳೆಯರ ಮೇಲೆ ಹಾಗೂ ಎಳೆಯ ವಯಸ್ಸಿನ ಹೆಣ್ಣುಮಕ್ಕಳ ಮೇಲೆ ಆಘಾತಕಾರಿಯೆನ್ನುವಷ್ಟು ಪ್ರಮಾಣದಲ್ಲಿ ಅತ್ಯಾಚಾರಗಳು ನಡೆಯುತ್ತಿವೆ. ಮಧ್ಯಪ್ರದೇಶದ ಜಬುವಾನಲ್ಲಿ ನಾಲ್ಕು ಜನ ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆದ ಅತ್ಯಾಚಾರ ಪ್ರಕರಣದೊಂದಿಗೆ, ಮದ್ರಾಸಿನಲ್ಲಿ ಕಳ್ಳತನದ ಆರೋಪದ ಮೇಲೆ ಗರ್ಭಿಣಿ ಮಹಿಳೆಯೊಬ್ಬಳನ್ನು ಪೊಲೀಸ್ ಠಾಣೆಯಲ್ಲಿ ಚಿತ್ರಹಿಂಸೆ ನೀಡಿ ಅತ್ಯಾಚಾರವೆಸಗಲಾಯಿತು. ಪೊಲೀಸ್ ಠಾಣೆಯಿಂದ ಹೊರಬಂದ ಮಹಿಳೆ ಅವಮಾನ ತಡೆಯಲಾರದೆ ಆತ್ಮಹತ್ಯೆ ಮಾಡಿಕೊಂಡಳು. ಬೆಂಗಳೂರಿನ ಮಾಗಡಿ ರಸ್ತೆಯಲ್ಲಿ ೧೮ ವರ್ಷದ ಹುಡುಗನೊಬ್ಬ ೭ ವರ್ಷದ ಎಳೆಯ ಹುಡುಗಿಯ ಮೇಲೆ ಅತ್ಯಾಚಾರವೆಸಗಿ ನಂತರ ಕೊಲೆ ಮಾಡಿದ. ಇವು ಕೆಲವು ನಿದರ್ಶನಗಳು ಮಾತ್ರ.

ಇಂತಹ ಸಂದರ್ಭದಲ್ಲಿ ಕೇಂದ್ರ ಗೃಹಮಂತ್ರಿಯವರು ಅಪರಾಧಿಗಳಿಗೆ ಮರಣ ದಂಡನೆಯ ಬಗ್ಗೆ ಮಾತನಾಡುತ್ತಿರುವುದರ ಹಿಂದೆ ರಾಜಕೀಯ ಉದ್ದೇಶವನ್ನು ಗ್ರಹಿಸಬಹುದು. ಸ್ತ್ರೀಯರ ಮೇಲೆ ನಡೆಯುತ್ತಿರುವ ತೀವ್ರ ಪ್ರಮಾಣದ ಹಿಂಸೆಯ ಹಿನ್ನೆಲೆಯಲ್ಲಿ ಮರಣದಂಡನೆಯ ಶಿಕ್ಷೆಯ ಮೂಲಕ, ಅಮಾಯಕ, ಅಸಹಾಯಕ ಸ್ತ್ರೀಯರ ಬೆಂಬಲವನ್ನು ಸುಲಭವಾಗಿ ಪಡೆಯಬಹುದೆಂಬ ಉದ್ದೇಶ ನಿಚ್ಚಳವಾಗಿದೆ.

ನೂರಾರು ವರ್ಷಗಳಿಂದ ನಿಂತ ನೀರಿನಂತೆ ಇದ್ದ ಅತ್ಯಾಚಾರದ ಕಾನೂನಿನಿಂದ ಅಪರಾಧಿಗೆ ಶಿಕ್ಷೆಯಾಗುವ ಬದಲು, ಕಾನೂನಿನ ತೊಡಕಿನಿಂದ ಮಹಿಳೆಯೆ ಬಲಿಪಶುವಾಗುತ್ತಿದ್ದಳು. ಮಹಿಳಾ ಸಂಘಟನೆಗಳು ಬೀದಿಗಿಳಿದು ಹೋರಾಟ ನಡೆಸಿದ್ದರ ಫಲವಾಗಿ ಇಂದು ತಿದ್ದುಪಡಿಯಾದ ಕಾನೂನು ನಮ್ಮ ಮುಂದಿದೆ. ಅಪರಾಧಿಗೆ ಕಠಿಣ ಶಿಕ್ಷೆಯನ್ನು ನೀಡುವುದರ ಜೊತೆಗೆ ಅತ್ಯಾಚಾರಕ್ಕೆ ಒಳಗಾದ ಮಹಿಳೆಯನ್ನು ಬಲಿಪಶುವಾಗುವ ಪ್ರಕ್ರಿಯೆಯಿಂದ ಹೊರತರುವುದು ಮಹಿಳಾ ಸಂಘಟನೆಗಳ ಸತತ ಹೋರಾಟದಿಂದ ಕಿಂಚಿತ್ತಾದರೂ ಸಾಧ್ಯವಾಗಿದೆ. ಆದರೆ ಮರಣ ದಂಡನೆಯಂತಹ ಉಗ್ರ ಶಿಕ್ಷೆಯ ಸಲಹೆ ಮೇಲ್ನೋಟಕ್ಕೆ ಆಕರ್ಷಕವಾಗಿ, ಬೆಂಬಲ ನೀಡಬಹುದಾದಂತಹ ಜನಪ್ರಿಯ ಕ್ರಮದಂತೆ ಕಂಡುಬಂದರೂ, ವಾಸ್ತವವಾಗಿ ಈ ಸಲಹೆ, ಮಹಿಳಾ ಸಂಘಟನೆಗಳು ಹುಟ್ಟುಹಾಕಿದ ಪ್ರಕ್ರಿಯೆಯನ್ನು ತಲೆಕೆಳಗೆ ಮಾಡುವ ಉದ್ದೇಶವನ್ನು ಹೊಂದಿದೆ. ಇದರಿಂದ ಮಹಿಳೆಯರನ್ನು ಮತ್ತಷ್ಟು ಬಲಿಪಶುಗಳಾಗುವ ಪ್ರಕ್ರಿಯೆಗೆ ಗುರಿಮಾಡಿದಂತಾಗುತ್ತದೆ.

ಪ್ರಸ್ತುತದಲ್ಲಿರುವ ಕಾನೂನಿನನ್ವಯ ಅಪರಾಧಿಗೆ ಜೀವಾವಧಿ ಜೈಲು ಶಿಕ್ಷೆಯಿದ್ದರೂ ಅಪರಾಧದ ಪ್ರಮಾಣ ಕಡಿಮೆಯಾಗಿಲ್ಲದಿರುವ ಅಂಶವನ್ನು ನಾವು ಗಮನಿಸಬೇಕಾಗಿದೆ. ಅತ್ಯಾಚಾರದ ಕಾನೂನಿನಲ್ಲಿರುವ ತೊಡಕುಗಳನ್ನು ಪ್ರಾಥಮಿಕ ಹಂತದಿಂದಲೂ ಗಮನಿಸಬೇಕಾಗುತ್ತದೆ. ಪೊಲೀಸ್ ಠಾಣೆಗಳಲ್ಲಿ ನಿಖರವಾಗಿ ದೂರನ್ನು ದಾಖಲಿಸದಿರುವುದು, ವೈದ್ಯಕೀಯ ಪರೀಕ್ಷೆಯ ವಿಳಂಬ, ಮಹಿಳೆಯರ ಮಾನಸಿಕ ಸ್ಥಿತಿ, ಅಂತಹ ಸಂದರ್ಭದಲ್ಲಿ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಮಾಹಿತಿಯ ಕೊರತೆ, ನ್ಯಾಯಾಲಯದಲ್ಲಿನ ವಿಚಾರಣಾ ಪ್ರಕ್ರಿಯೆ, ಮಹಿಳೆಯ ಬಗ್ಗೆ ಪೂರ್ವಗ್ರಹಪೀಡಿತ ಧೋರಣೆ, ಜೊತೆಗೆ ಕೆಲಸ ಮಾಡುವ ಹಣ, ಪ್ರಭಾವಿ ವ್ಯಕ್ತಿಗಳ ಕೈವಾಡ, ಇವುಗಳನ್ನೆಲ್ಲಾ ಗಮನಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿಯೇ ಬಹಳಷ್ಟು ಪ್ರಕರಣಗಳು ಸಾಕ್ಷಿಯ ಕೊರತೆಯಿಂದ ಸಾಬೀತುಗೊಳ್ಳದೇ ಬಿದ್ದು ಹೋಗುತ್ತವೆ.

ಜಲಗಾವ್ ಲೈಂಗಿಕ ಹಗರಣದಲ್ಲಿ ಮಹಾರಾಷ್ಟ್ರ ನ್ಯಾಯಾಲಯ ಸೂಕ್ತ ಸಾಕ್ಷ್ಯಾಧಾರಗಳಿಲ್ಲದೆ, ಆರೋಪಿಯನ್ನು

ಬಿಡುಗಡೆಗೊಳಿಸಿರುವುದು ಆಶ್ಚರ್ಯಕರವಾದರೆ, ಅತ್ಯಾಚಾರಕ್ಕೆ ಒಳಗಾದ ಹುಡುಗಿಯ ಪೂರ್ವ ಚರಿತ್ರೆಯ ಆಧಾರವನ್ನು ಗಣನೆಗೆ ತೆಗೆದುಕೊಂಡಿರುವುದು ಆಘಾತಕಾರಿಯಾಗಿದೆ. ಅತ್ಯಾಚಾರದ ಪ್ರಕರಣದಲ್ಲಿ ಸ್ತ್ರೀಯರ ಪೂರ್ವ ಲೈಂಗಿಕ ಚರಿತ್ರೆಯನ್ನು ಪರಿಗಣಿಸಬಾರದು ಎಂಬ ಬೇಡಿಕೆಯನ್ನು ಮಹಿಳಾ ಸಂಘಟನೆಗಳು ಮಾಡುತ್ತಾ ಬಂದಿದ್ದರೂ ಜಲಗಾವ್ ತೀರ್ಪು ಮಹಿಳೆಯರಿಗೆ ದೊರೆಯುತ್ತಿರುವ ನ್ಯಾಯದ ಕನ್ನಡಿಯಾಗಿದೆ.

ಮರಣದಂಡನೆಯ ಶಿಕ್ಷೆಯ ಸಲಹೆಯು ಸ್ತ್ರೀಯರ ಹಿತಾಸಕ್ತಿಯ ವಿರುದ್ಧ ಕೆಲಸ ಮಾಡುವ ಅಸ್ತ್ರವಾಗಿ ಪರಿಣಮಿಸುತ್ತದೆ. ಮರಣದಂಡನೆಯಂತಹ ಉಗ್ರಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಅತ್ಯಾಚಾರ ಮಾಡಿ, ಸಾಕ್ಷಿ ಪುರಾವೆಯನ್ನು ನಾಶಪಡಿಸುವ ಉದ್ದೇಶದಿಂದ ಅವಳನ್ನು ಕೊಲೆ ಮಾಡಿಬಿಡುವ ಸಾಧ್ಯತೆ ಇದೆ. ಉಗ್ರ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಹಣ, ಅಧಿಕಾರ, ಎಲ್ಲವನ್ನು ಬಳಸಿಕೊಳ್ಳಬಹುದು. ಭಾರತದಲ್ಲಿ ಗಂಭೀರವಾದ ಅಪರಾಧವನ್ನು ಎಸಗಿಸಿದವರಿಗೂ ದೊರೆಯುತ್ತಿರುವ ಶಿಕ್ಷೆ ಕೇವಲ ಶೇ. ೪ ರಷ್ಟು ಮಾತ್ರ. ಹೀಗಿರುವ ಭ್ರಷ್ಟ ವ್ಯವಸ್ಥೆಯಲ್ಲಿ ನಿಜವಾದ ಅಪರಾಧಿಯೇ ಶಿಕ್ಷೆಗೆ ಗುರಿಯಾಗುತ್ತಾನೆಂಬ ಭರವಸೆಯೇನು?

ಅತ್ಯಾಚಾರವೆಸಗಿದ ವ್ಯಕ್ತಿ ಕಠಿಣವಾದ ಶಿಕ್ಷೆಗೆ ಗುರಿಯಾಗಲೇಬೇಕು. ಅತ್ಯಾಚಾರದ ಪ್ರಕರಣಗಳಲ್ಲಿ ಸಾಕ್ಷಿಗಳನ್ನು ಒದಗಿಸಿ, ಸಾಬೀತುಗೊಳಿಸುವುದು ಕ್ಲಿಷ್ಟ ಹಾಗೂ ಸಂಕೀರ್ಣವಾದ ಸಮಸ್ಯೆಯಾಗಿದೆ. ಇಂತಹ ಸಂದರ್ಭದಲ್ಲಿ 'ಮರಣ ದಂಡನೆಯ ಶಿಕ್ಷೆ' ಸಲಹೆ ಕೇವಲ, ಅನುಕಂಪ, ಸಹಾನುಭೂತಿ ಗಳಿಸುವ ತಂತ್ರವಾಗಿದೆ. ಜನತಾಂತ್ರಿಕ ವ್ಯವಸ್ಥೆಯಲ್ಲಿ 'ಮರಣದಂಡನೆ' ಒಂದು ಬಾರ್ಬಾರಿಕ್ ಆದ ಶಿಕ್ಷೆಯೆಂಬುದನ್ನು ಮಾನವೀಯ ಹಕ್ಕುಗಳಿಗೆ ಹೋರಾಡುತ್ತಿರುವ ಸಂಘಟನೆ ಎತ್ತಿ ತೋರಿಸಿವೆ. ರಾಜ್ಯಕ್ಕೆ ಹೆಚ್ಚಿನ ಅಧಿಕಾರ ನೀಡುವುದು, ರಾಜ್ಯ ದುರುಪಯೋಗ ಪಡಿಸಿಕೊಂಡು ರಾಜಕೀಯ ಉದ್ದೇಶಗಳಿಗಾಗಿ ಬಳಸುವ ಸಾಧ್ಯತೆಗಳೂ ಇವೆ.

ಅತ್ಯಾಚಾರವೆಸಗಿದ ವ್ಯಕ್ತಿಗೆ ಗಂಭೀರವಾದ ಶಿಕ್ಷೆಯಾಗಲೇಬೇಕು. ಆದರೆ ಪ್ರಸ್ತುತದಲ್ಲಿ ಅಪರಾಧಿಗೆ ಶಿಕ್ಷೆಯಾಗುವುದಿರಲಿ, ಪ್ರಾಥಮಿಕ ಹಂತಹಂತದಲ್ಲಿ ಆರೋಪವನ್ನು ಸಹ ಹೊರಿಸುತ್ತಿಲ್ಲ. ಸ್ತ್ರೀಗೆ ನ್ಯಾಯ ದೊರಕಿಸಿಕೊಡಬೇಕಾದರೆ ಆ ಪ್ರಕ್ರಿಯೆ ಪ್ರಾಥಮಿಕ ಹಂತದಿಂದ ಪ್ರಾರಂಭವಾಗಬೇಕು. ಅಪರಾಧಿಗೆ ಶಿಕ್ಷೆ ಖಾಯಂ ಆಗಬೇಕು. ಈ ನಿಟ್ಟಿನಲ್ಲಿ ಗಂಭೀರವಾಗಿ ಚಿಂತಿಸದೇ, ಮರಣದಂಡನೆಯ ಶಿಕ್ಷೆ ಕೇವಲ ಜನಪ್ರಿಯ ರಾಜಕೀಯ ತಂತ್ರದ ಒಂದು ಗಿಮಿಕ್ ಅಷ್ಟೆ.

## ಪ್ರತಿಭಟನೆ

ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆದ ಸಾಮೂಹಿಕ ಅತ್ಯಾಚಾರವನ್ನು ಖಂಡಿಸಿ ವುಮೆನ್ಸ್ ವಾಯ್ಸ್ ಹಾಗೂ ರಾಷ್ಟ್ರೀಯ ಮಹಿಳಾ ಒಕ್ಕೂಟ ಪ್ರತಿಭಟನಾ ಸೂಚಕ ಸಭೆ ಹಾಗೂ ಬಹಿರಂಗ ಸಭೆಯನ್ನು ದಿನಾಂಕ 13-10-98ರಂದು ಮಹಾತ್ಮ ಗಾಂಧಿಯ ಪ್ರತಿಮೆಯ ಬಳಿ ಏರ್ಪಡಿಸಲಾಗಿತ್ತು. ಭಾರತದಲ್ಲಿ ಮಹಿಳೆಯರ ಮತ್ತು ಅಲ್ಪಸಂಖ್ಯಾತರ ಮೇಲಿನ ದೌರ್ಜನ್ಯಗಳ ನಿರಂತರ ಬೆಳವಣಿಗೆಯನ್ನು ಗಮನಿಸುವುದರ ಜೊತೆಗೆ ಸಿಖ್ಖರ ಮೇಲೆ ಹಾಗೂ ನಂತರ ಬಾಬರಿ ಮಸೀದಿ ನೆಲಸಮವಾದ ನಂತರ ದಾರುಣ ಹಲ್ಲೆಗಳ ಮೇಲೆ ಒತ್ತುನೀಡಿ. ಕೋಮು, ವರ್ಗ, ಜಾತಿ, ಧಾರ್ಮಿಕ ಹಾಗೂ ರಾಜಕೀಯ ಗಲಭೆಗಳಲ್ಲಿ ಒಂದು ವ್ಯವಸ್ಥಿತ ಸಂಚು ತನ್ನ ಪಾತ್ರವನ್ನು ನಿರ್ವಹಿಸಿದೆಯೆಂಬ ಅಂಶವನ್ನು ಈ ಸಂದರ್ಭದಲ್ಲಿ ಪ್ರಕಟಿಸಲಾದ ಕರಪತ್ರದಲ್ಲಿ ಎತ್ತಿಹಿಡಿಯಲಾಗಿದೆ.

ಮಹಿಳೆ ಮತ್ತು ಅಲ್ಪಸಂಖ್ಯಾತರ ಮೇಲೆ ತೀವ್ರವಾಗುತ್ತಿರುವ ದೌರ್ಜನ್ಯಗಳನ್ನು ಖಂಡಿಸುತ್ತಲೇ, ಕೆಲವು ಪ್ರಮುಖ ಬೇಡಿಕೆಗಳನ್ನು ಮುಂದಿಟ್ಟಿದೆ.

**ಪ್ರಮುಖ ಬೇಡಿಕೆಗಳು :**

1. ಅಪರಾಧಿಗಳನ್ನು ಗುರುತಿಸಿ-ಉಗ್ರ ಶಿಕ್ಷೆಗೆ ಗುರಿಪಡಿಸಿ ಮತ್ತು ಈ ಅಪರಾಧದ ಹಿಂದೆ ಇರುವ ಉದ್ದೇಶವನ್ನು ಬಹಿರಂಗಪಡಿಸಿ.
2. ಕೇಂದ್ರ ಗೂಢಚಾರ ಆಯುಕ್ತರ ವ್ಯಾಪ್ತಿಯಲ್ಲಿ ಎಲ್ಲಾ ಅಪರಾಧಗಳ ತನಿಖೆಯನ್ನು ಕೇಂದ್ರ ತನಿಖಾ ಮಂತ್ರಾಲಯಕ್ಕೆ ಒಪ್ಪಿಸಿ.
3. ಶಾಂತಿ ಮತ್ತು ಕೋಮು ಸೌಹಾರ್ದತೆಯನ್ನು ಕಲಕುವ ಮೂಲಭೂತವಾದಿಗಳ ಚಟುವಟಿಕೆಗಳಿಗೆ ಕಡಿವಾಣ ಹಾಕಿ.
4. ಅಲ್ಪಸಂಖ್ಯಾತ ವಿರೋಧಿ ಅಲೆಯ ಬಗ್ಗೆ ತನಿಖೆ ನಡೆಸಲು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಆಯೋಗವನ್ನು ರಚಿಸಿ.
5. ಮಹಿಳೆಯರ ಮೇಲಿನ ಎಲ್ಲಾ ವಿಧದ ದೌರ್ಜನ್ಯ ಗಳನ್ನು ನಿಯಂತ್ರಿಸಲು ಮತ್ತು ಅವರನ್ನು ಸಂರಕ್ಷಿಸಲು ಪರಿಣಾಮಕಾರಿಯಾದ ಕಾನೂನುಗಳನ್ನು ಅನುಷ್ಠಾನಕ್ಕೆ ತನ್ನಿ.
6. ಅತ್ಯಾಚಾರಕ್ಕೆ ಒಳಗಾದವರಿಗಾಗಿ ಪ್ರತ್ಯೇಕ ಮತ್ತು ಪೂರಕವಾದ ಕಾರ್ಯಕ್ರಮಗಳು, ಪರಿಹಾರಗಳನ್ನು ಎಲ್ಲಾ ರಾಜ್ಯ ಸರ್ಕಾರಗಳು ಕೂಡಲೇ ರೂಪಿಸಬೇಕು.
7. ಅಪರಾಧ ನಡೆದ ಸ್ಥಳಗಳಲ್ಲಿ ಪ್ರತ್ಯೇಕ ವಿಶೇಷ ನ್ಯಾಯಾಲಯಗಳನ್ನು ರಚಿಸುವುದು ಮತ್ತು ತುರ್ತಾಗಿ ನ್ಯಾಯ ಒದಗಿಸುವುದು.

# 'ಮಹಿಳಾ ಚಳುವಳಿಯ ಮಜಲುಗಳು' : ಒಂದು ಅಭಿಪ್ರಾಯ

*ನವಕರ್ನಾಟಕ ಪ್ರಕಾಶನ ಸಂಸ್ಥೆಯ 'ಸ್ವಾತಂತ್ರ್ಯೋತ್ತರ ಭಾರತ' ಮಾಲಿಕೆಗಾಗಿ ಎನ್. ಗಾಯತ್ರಿಯವರು ರಚಿಸಿದ 'ಮಹಿಳಾ ಚಳುವಳಿಯ ಮಜಲುಗಳು' ಕೃತಿಯು ಭಾರತದ ಮಹಿಳಾ ಚಳುವಳಿಯ ವಿವಿಧ ಮಜಲುಗಳನ್ನು ಓದುಗರಿಗೆ ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಮಾಡುತ್ತದೆ. ಭಾರತದ ಸ್ವಾತಂತ್ರ್ಯ ಚಳುವಳಿಯಿಂದ ಪ್ರಾರಂಭವಾಗಿ ವಿವಿಧ ಘಟ್ಟದಲ್ಲಿನ ಚಳುವಳಿಯ ವಿಶ್ಲೇಷಣೆಯನ್ನು ಎನ್. ಗಾಯತ್ರಿಯವರು ತಮ್ಮ ದೇ ಆದ ರಾಜಕೀಯ ಧೋರಣೆಯಲ್ಲಿ ಮಾಡುತ್ತಾರೆ. 70ರ ದಶಕದ ನಂತರ ರಾಷ್ಟ್ರೀಯ ಹಾಗೂ ಕರ್ನಾಟಕದ ಮಟ್ಟದಲ್ಲಿ ಚಳುವಳಿಯನ್ನು ವಿಶ್ಲೇಷಿಸುವಲ್ಲಿ ಮಾಹಿತಿ ಸಂಗ್ರಹದ ಕೊರತೆ, ಅವಸರದ ಹಾಗೂ ಹೊರನೋಟದ ಅವಲೋಕನ, ವಸ್ತುನಿಷ್ಠತೆಯ ಕೊರತೆ ಕಂಡುಬರುತ್ತದೆ. ಸ್ವಾಯತ್ತ ಮಹಿಳಾ ಸಂಘಟನೆಗಳ ಹಿನ್ನೆಲೆಯಲ್ಲಿ 70ರ ದಶಕದ ನಂತರದ ವಿಶ್ಲೇಷಣೆಯನ್ನು ಕುರಿತು ಮಾನಸದ ಅಭಿಪ್ರಾಯಗಳನ್ನು ಇಲ್ಲಿ ಚರ್ಚಿಸಲಾಗಿದೆ.*

ಸ್ವಾಯತ್ತ ಮಹಿಳಾ ಚಳುವಳಿಯ ಪ್ರಸ್ತುತತೆ, ಸ್ವಾಯತ್ತ ಮಹಿಳಾ ಸಂಘಟನೆಗಳ ರಚನೆ, ರಚನೆಯ ಹಿನ್ನೆಲೆಯಲ್ಲಿ ನಿರೂಪಿಸಲು ಪ್ರಯತ್ನಿಸುತ್ತಿರುವ ತಾತ್ವಿಕ ನಿಲುವು, ವಿವಿಧ ರಾಜಕೀಯ ಪರಿಸ್ಥಿತಿಯಲ್ಲಿ ಸ್ವಾಯತ್ತ ಮಹಿಳಾ ಸಂಘಟನೆಗಳು ವಹಿಸುತ್ತಿರುವ ಪಾತ್ರ, ರಾಜಕೀಯ ಸ್ಥಿತಿ ಹಾಗೂ ರಾಜಕೀಯ ಪಕ್ಷಗಳ ವಿಶ್ಲೇಷಣೆ, ಒತ್ತು ನೀಡಿರುವ ಲಿಂಗಾಧರಿತ ಶೋಷಣೆ ಹಾಗೂ ಇತರ ಸಮಸ್ಯೆಗಳು ಇವುಗಳ ಬಗ್ಗೆ ಎರಡು ದಶಕಗಳಿಂದ ಸ್ವಾಯತ್ತ ಮಹಿಳಾ ಸಂಘಟನೆಗಳು ನಡೆಸಿರುವ ಪ್ರಯತ್ನವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕಾಗಿತ್ತು.

ಪಿತೃಪ್ರಧಾನತೆ, ಬಂಡವಾಳಶಾಹಿ ಸಮಾಜ, ಜಾತಿ ವ್ಯವಸ್ಥೆ ಒಂದಕ್ಕೊಂದು ಪೂರಕವಾಗಿ ಕಾರ್ಯನಿರ್ವಹಿಸುವ ವಿಧಾನವನ್ನು ಬಯಲಿಗೆಳೆಯುವಲ್ಲಿ ಸ್ವಾಯತ್ತ ಮಹಿಳಾ ಸಂಘನೆಗಳ ರಾಜಕೀಯ ವಿಶ್ಲೇಷಣೆಯೂ ಇದೆಯೆಂಬುದನ್ನು ಇಲ್ಲಿ ನಿರ್ಲಕ್ಷಿಸಲಾಗಿದೆ. ಎಡ ಪಂಥೀಯ ರಾಜಕೀಯ ಪಕ್ಷಗಳಲ್ಲಿ ಕಾರ್ಯನಿರ್ವಹಿಸಿದ, ಒಲವುಳ್ಳ ಕಾರ್ಯಕರ್ತೆಯರು, ಎಡಪಂಥೀಯ ರಾಜಕೀಯ ಪಕ್ಷಗಳು ಸ್ತ್ರೀಯರ ಸಮಸ್ಯೆಗಳ ಬಗ್ಗೆ ತಳೆದ ನಿಲುವಿನ ತಾತ್ವಿಕ ಭಿನ್ನಾಭಿಪ್ರಾಯವೇ ಒಂದರ್ಥದಲ್ಲಿ ಮಹಿಳಾ ಸಂಘಟನೆಗಳ ಸ್ವಾಯತ್ತತೆಯ ಆಲೋಚನೆಗೆ ದಾರಿ ನೀಡಿತು. ಉದಾ : 70ರ ದಶಕದಲ್ಲಿ ಎಡಪಂಥೀಯ ರಾಜಕೀಯ ಪಕ್ಷಗಳಲ್ಲಿ, ಪಿತೃಪ್ರಧಾನತೆ, ವರದಕ್ಷಿಣೆ, ಅತ್ಯಾಚಾರ, ಕೌಟುಂಬಿಕ ಹಿಂಸೆ, ಮುಂತಾದ ಸಮಸ್ಯೆಗಳಿಗೆ ಒತ್ತು ನೀಡಿದ ಮಹಿಳಾ ಸಂಘಟನೆಗಳನ್ನು ಬೂರ್ಜ್ವಾ ಸಂಘಟನೆಗಳು, ಲಿಂಗಾಧರಿತ ಸಮಸ್ಯೆಗಳಿಗೆ ಒತ್ತು ನೀಡಿದರೆ ಕುಟುಂಬಗಳು ಒಡೆದು ಹೋಗುತ್ತವೆ, ಲಿಂಗಾಧರಿತ ಸಮಸ್ಯೆಗಳಿಗೆ ಮಾಸ್‌ಬೇಸ್ ಇಲ್ಲ, ಆರ್ಥಿಕ ಹೋರಾಟಗಳೇ ಲಿಂಗಾಧರಿತ ಸಮಸ್ಯೆಗಳಿಗೆ ಉತ್ತರ ನೀಡುತ್ತವೆ ಎಂಬ ಧೋರಣೆಗಳು ಪ್ರಚಲಿತವಾಗಿದ್ದವು. ಇವು ಕೆಲವು ನಿದರ್ಶನಗಳು ಮಾತ್ರ. ಒಟ್ಟಾಗಿ ಸ್ವಾಯತ್ತ ಮಹಿಳಾ ಸಂಘಟನೆಗಳು ಚಾರಿತ್ರಿಕವಾಗಿ ಎತ್ತಿದ ಮೂಲಭೂತ ತಾತ್ವಿಕ ಪ್ರಶ್ನೆಗಳನ್ನು ಉದ್ದೇಶ ಪೂರ್ವಕವಾಗಿ ಈ ಕೃತಿ ನಿರ್ಲಕ್ಷಿಸಿದೆ ಎನ್ನಿಸುತ್ತದೆ.

ಸ್ವಾಯತ್ತ ಮಹಿಳಾ ಸಂಘಟನೆಗಳ ಬಗ್ಗೆ ಚರ್ಚಿಸುವಾಗ ಎನ್.ಜಿ.ಓ. ಹಾಗೂ ಸ್ವಾಯತ್ತ ಮಹಿಳಾ ಸಂಘಟನೆಗಳನ್ನು ಒಂದೇ ತಕ್ಕಡಿಯಲ್ಲಿಟ್ಟು ಗೊಂದಲಮಯವಾಗಿ ಮಾಡಲಾಗಿದೆ. ಸಂಘಟನೆಗಳ ಬಾಹ್ಯ ಸಂಗತಿಗಳನ್ನು ಗಮನಿಸಿ ಹೊರ ನೋಟದಿಂದ, ಕೆಲವೊಮ್ಮೆ ಕೇವಲ ಸಂಘಟನೆಗಳ ವ್ಯಕ್ತಿಗಳ ಬಾಹ್ಯ ನಡವಳಿಕೆಗಳಿಂದ ತಾತ್ವಿಕ ತೀರ್ಮಾನಕ್ಕೆ ಬಂದು ಚರ್ಚಿಸಲಾಗಿದೆ. ಇದು ಲೇಖಕಿಯ ಗ್ರಹಿಕೆಯ ಮಿತಿಯೂ ಆಗಿರಬಹುದು. ಈ ಮಿತಿಯೊಂದಿಗೆ ಎಡಪಂಥೀಯ ಪಕ್ಷ ರಾಜಕೀಯ ನಿಲುವಿನ ಹಿನ್ನೆಲೆಯಲ್ಲಿ ಮಹಿಳಾ ಚಳುವಳಿಯ ಮಜಲುಗಳನ್ನು ದಾಖಲಿಸಿರುವುದು ಸ್ಪಷ್ಟವಾಗಿದೆ. ಈ ಸೀಮಿತ ದೃಷ್ಟಿಕೋನದಿಂದಾಗಿ ಕೃತಿಯು ವಸ್ತುನಿಷ್ಠತೆಯನ್ನು ಕಳೆದುಕೊಂಡಿದೆ, ಜೊತೆಗೆ ಪೂರ್ವಗ್ರಹ ನೋಟವನ್ನು ಪ್ರಸ್ತಕದುದ್ದಕ್ಕೂ ನೋಡಬಹುದು. ಯಾವುದೇ ಚಳುವಳಿಗಿರದ ಅನೇಕ ಸಂಕೀರ್ಣ ಸವಾಲುಗಳು ಮಹಿಳಾ ಚಳುವಳಿಗಿದೆ. ಹಾಗಾಗಿ ಸ್ತ್ರೀವಾದಿ ಚಳುವಳಿ ಸ್ವಾಯತ್ತ ನೆಲೆಯನ್ನು ಬಯಸುವುದು ಅವಶ್ಯಕವೆಂಬ ಗ್ರಹಿಕೆ ಸ್ವಾಯತ್ತ ಮಹಿಳಾ ಸಂಘಟನೆಯದು. ಈ ಸಂಘನೆಗಳಲ್ಲೂ ಎಲ್ಲಾ ಸಂಘಟನೆಗಳಲ್ಲಿ ಕಂಡುಬರುವ ಗೊಂದಲ, ಮಿತಿ, ವಿರೋಧಾಭಾಸಗಳು ಸಹಜವಾಗಿ ಕಂಡುಬರುತ್ತವೆ. ಇವುಗಳನ್ನು ಮೀರುವಲ್ಲಿ ಈ ಸಂಘಟನೆಗಳು ನಡೆಸುವ ಪ್ರಾಮಾಣಿಕ ಪ್ರಯತ್ನದ ಹಾದಿ ಅರ್ಥಪೂರ್ಣವಾದುದು.

ಸ್ವಾಯತ್ತತೆಯ ಪರಿಕಲ್ಪನೆ ಅಥವಾ ಹೋರಾಟದ ಪರಿಕಲ್ಪನೆ 'ಅಧಿಕಾರ ಶಕ್ತಿ ರಾಜಕೀಯಕ್ಕೆ ಪರ್ಯಾಯವಾಗುತ್ತದೆ' ಎಂಬ ಭ್ರಮೆ ಸ್ವಾಯತ್ತ ಮಹಿಳಾ ಸಂಘಟನೆಗಳಿಗಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಇವು ಒತ್ತಡವನ್ನು ಹೇರುವ ಕೆಟಾಲಿಸ್ಟ್‌ಗಳ ಪಾತ್ರವನ್ನು ಮಾತ್ರ ವಹಿಸಬಲ್ಲವು. ಹಾಗಾಗಿ ಇವು ಹಮ್ಮಿಕೊಳ್ಳುವ ಹೋರಾಟ, ಅವುಗಳ ಸ್ವರೂಪ ಭಿನ್ನವಾಗಿಯೇ ಇರುತ್ತದೆ. ಹಾಗಾಗಿ ಇಂದು ಚಳುವಳಿ ಹೋರಾಟದ ಸ್ವರೂಪವನ್ನೇ ಪುನರ್ ವ್ಯಾಖ್ಯಾನಿಸಬೇಕಾದ ಅಗತ್ಯವನ್ನು ಒತ್ತಿಹೇಳುತ್ತದೆ.

ಜರ್ಮನಿಯ ಗ್ರೀನ್‌ಪೀಸ್ ಚಳುವಳಿ ಹೋರಾಟದ ಸ್ವರೂಪವನ್ನು ಪುನರ್‌ವ್ಯಾಖ್ಯಾನಿಸಲು ಪ್ರಯತ್ನಿಸಿರುವುದನ್ನು ಪೆಟ್ರಾಕೆಲ್ಲಿ ವಿವರವಾಗಿ ಬರೆಯುತ್ತಾರೆ. ಸಣ್ಣಸಣ್ಣ ರಾಜಕೀಯ ಸಂಘಟನೆಗಳು ಹೇಗೆ ಅಧಿಕಾರದ ಶಕ್ತಿ ರಾಜಕೀಯಕ್ಕೆ ಪರ್ಯಾಯವಾಗಿ ಕೆಲಸ ಮಾಡಬಲ್ಲವು ಎಂಬುದನ್ನು ನಿದರ್ಶನ ಸಹಿತ ವಿವರಿಸುತ್ತಾರೆ. ಚಳುವಳಿಗೆ ಮಾಸ್‌ಬೇಸ್ ಇರಬೇಕೆಂಬುದು ಒಂದು ಕಲ್ಪನೆ. ಆದರೆ ವಾಸ್ತವವಾಗಿ ಇದು ಸಾಧ್ಯವಾಗದಿರುವ ಸನ್ನಿವೇಶಗಳಿರುವಾಗ ವೈಯಕ್ತಿಕ ಹಾಗೂ ರಾಜಕೀಯವನ್ನು ಬೆಸೆಯಬಹುದಾದ, ಸಣ್ಣ ಸಂಘಟನೆಗಳು ಪ್ರಸ್ತುತ ರಾಜಕೀಯ ಪರಿಸ್ಥಿತಿಗೆ ಉತ್ತರವಾಗಿ ಬೆಳೆಯಬಲ್ಲವು. ಇವು ಅರ್ಥಪೂರ್ಣವಾಗಿ ಕೆಲಸ ನಿರ್ವಹಿಸಬಲ್ಲವು ಎಂದು ಆಕೆ ಭಾವಿಸುತ್ತಾರೆ.

ಎಡ ಪಕ್ಷದ ಶ್ರೇಣೀಕೃತ ವ್ಯವಸ್ಥೆ, ನಾಯಕತ್ವ ಪರಿಕಲ್ಪನೆಯ ವಸ್ತುನಿಷ್ಠ ವಿಮರ್ಶೆಯಿಂದಾಗಿಯೇ ಸ್ವಾಯತ್ತ ಮಹಿಳಾ ಸಂಘನೆಗಳು ಸಾಮೂಹಿಕ ನಾಯಕತ್ವ, ಜವಾಬ್ದಾರಿ, ಮುಂತಾದ ಮಹಿಳೆಯರ ಜೀವನ ಶೈಲಿಗೆ ಆತ್ಮೀಯವಾದ, ಹತ್ತಿರವಾದ ಪರಿಕಲ್ಪನೆಯ ಪ್ರಯೋಗವನ್ನು ಕೆಲವು ಸಂಘಟನೆಗಳು ನಡೆಸುತ್ತಿವೆ. ಈ ಪ್ರಯೋಗ ಹೊರನೋಟಕ್ಕೆ ಲೇಖಕಿಗೆ ಅರಾಜಕತೆಯ ಸಂಕೇತವಾಗಿ ಕಾಣಿಸುತ್ತದೆ. ಸಂಘಟನೆಗಳು ರಚನಾರಹಿತವಾಗಿ ಅರಾಜಕತೆಯಿಂದ ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ. ಈ ಪ್ರಯೋಗದಲ್ಲಿಯೂ ಕೆಲವು ಮಿತಿಗಳು ಇರಬಹುದು; ಇವೆ. ಈ ಪ್ರಯೋಗ ಹುಟ್ಟುಹಾಕಲು ಪ್ರಯತ್ನಿಸುತ್ತಿರುವ ಸಂಘಟನೆಯ ರಚನೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವ ಮನಸ್ಸು ಬೇಕು. ಜೊತೆಗೆ ಸಂಘಟನೆಗಳ ಗುರಿ, ಉದ್ದೇಶ, ಅವುಗಳ ಕಾರ್ಯವಿಧಾನ, ಅವುಗಳು ಸಮಸ್ಯೆಗಳನ್ನು ವಿಶ್ಲೇಷಿಸುವ ಹಿನ್ನಲೆಯಲ್ಲಿ ಅವುಗಳ ರಾಜಕೀಯ ಸ್ವರೂಪವನ್ನೂ ಅಳೆಯಬೇಕಾಗುತ್ತದೆ.

ಮಹಿಳಾ ಸಂಘಟನೆಗಳ ರಚನೆಯ ವೈಶಾಲ್ಯ ವಿವಿಧ ವರ್ಗ, ಜಾತಿ, ವಿವಿಧ ಪಕ್ಷ, ಪಂಗಡಗಳಲ್ಲಿ ಹಂಚಿ ಹರಿದುಹೋಗಿರುವ ಮಹಿಳೆಯ ಬದುಕಿನ ಆಯ್ಕೆಯ ಸ್ವಾತಂತ್ರ್ಯವನ್ನು ಒಳಗೊಳ್ಳುತ್ತದೆ. ಇದು ಸಾಮಾಜಿಕ ರಾಜಕೀಯ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ನಡೆಯುವ ಪ್ರಕ್ರಿಯೆ ಆಗಿದೆ. ಲೇಖಕಿಗೆ ಮುಖ್ಯವಾಗುವುದು ಹೋರಾಟದ ಕೊನೆಯೇ ಆಗಿದೆ. ಹೋರಾಟದ ವಿಧಾನ, ಸಿದ್ಧತೆಗಳಿಗೆ ಗುರಿಯಷ್ಟೆ ಮಹತ್ವವನ್ನು ಸ್ವಾಯತ್ತ ಮಹಿಳಾ ಸಂಘಟನೆಗಳು ಒತ್ತುನೀಡುವುದರಿಂದ ವ್ಯಕ್ತಿ ಸ್ವಾತಂತ್ರ್ಯದೊಂದಿಗೆ ಸಾಮೂಹಿಕ ಜವಾಬ್ದಾರಿಯ ಈ ಪ್ರಕ್ರಿಯೆ ಹೊರ ನೋಟಕ್ಕೆ ಗಾಯತ್ರಿಯವರಿಗೆ ಅರಾಜಕತೆಯಂತೆ ಕಾಣಬಹುದು.

ಗಾಯತ್ರಿಯವರು ಸ್ತ್ರೀವಾದಿ ಚಳುವಳಿಯನ್ನು ಬೌದ್ಧಿಕತೆಗಷ್ಟೇ ಸೀಮಿತಗೊಳಿಸುತ್ತಾರೆ. ಇದು ಮಧ್ಯಮ ಹಾಗೂ ಮೇಲ್ಪದರದ ಮಹಿಳೆಯರ ಹೋರಾಟ ಎನ್ನುತ್ತಾರೆ. ಇದನ್ನು ಸ್ತ್ರೀವಾದಿ ಚಳುವಳಿಯಲ್ಲಿನ ಸ್ತ್ರೀವಾದಿಗಳೇ ಒಪ್ಪಿಕೊಳ್ಳುತ್ತಾರೆ. ಆದರೆ ವಿರೋಧಾಭಾಸ ಕಂಡುಬರುವುದು, ಮಹಿಳಾ ವಿಭಾಗಗಳು ಸಾಧಿಸಲಾಗದ, ಮಧ್ಯಮವರ್ಗದ, ಮೇಲ್ಪದರದ ಸ್ತ್ರೀವಾದಿ ಮಹಿಳಾ ಚಳುವಳಿಯ ಎರಡು ದಶಕದ ಹೋರಾಟದ ಪರಿಶ್ರಮದಿಂದ ಸ್ತ್ರೀಯರ ಜೀವನದ ವಿವಿಧ ಕ್ಷೇತ್ರದಲ್ಲಿ ಗಳಿಸಿದ ಸಾಧನೆಗಳನ್ನು, ಬದಲಾವಣೆಗಳನ್ನು ಮಹಿಳಾ ಚಳುವಳಿಯ ಸಾಧನೆಗಳೆಂದು ದಾಖಲುಗೊಳಿಸುವಲ್ಲಿ ಲೇಖಕಿಗಿರುವ ಆಸಕ್ತಿಯಲ್ಲಿ. ರಾಜಕೀಯಕ್ಕೆ, ನವವಸಾಹತುಶಾಹಿ ಹೋರಟಕ್ಕೆ, ಕಾರ್ಮಿಕ ಪ್ರಶ್ನೆಗಳಿಗೆ ಹೆಚ್ಚು ಒತ್ತುಕೊಡುವ ಲೇಖಕಿಯರು ಲಿಂಗಾಧರಿತ ಶೋಷಣೆಯ ಬಗ್ಗೆ, ಚಳುವಳಿಗಳಿಗೆ ಎಲ್ಲಿ, ಎಷ್ಟು ಒತ್ತುಕೊಡಬೇಕು ಎಂಬುದನ್ನು ಗಮನಿಸಬೇಕು ಎಂಬುದರ ಮೇಲೆ ಗಮನ ಹರಿಸುವುದರಿಂದ ಇವರ ಹೋರಾಟದ ನೆಲೆಗಳು ಬೇರೆಯೇ ಆಗುತ್ತವೆ.

ಸ್ವಾಯತ್ತ ಮಹಿಳಾ ಚಳುವಳಿ ಅತಿರೇಕಗಳನ್ನು ಬಳಸುತ್ತದೆ ಎಂದು ಲೇಖಕಿಯು ಆರೋಪಿಸುತ್ತಾರೆ. ಇದಕ್ಕೆ 'ಮಾನುಷಿ' ಪತ್ರಿಕೆಯು ವರದಕ್ಷಿಣೆ, ಸಮಾನ ನಾಗರೀಕ ಸಂಹಿತೆಯ ಬಗ್ಗೆ ತಳೆದ ನಿಲುವನ್ನು ಸ್ವಾಯತ್ತ ಸಂಘಟನೆಗಳ ನಿಲುವಿಗೆ ನಿದರ್ಶನವಾಗಿ ನೀಡುತ್ತಾರೆ. ಮಧುಕೀಶ್ವರ್‌ರವರ ವರದಕ್ಷಿಣೆಯ ಬಗೆಗಿನ ನಿಲುವನ್ನು ಅನೇಕ ಮಹಿಳಾ ಸಂಘಟನೆಗಳು ಸಹಾ ವಿರೋಧಿಸಿವೆ. ಸಮಾನ ನಾಗರೀಕ ಸಂಹಿತೆಯನ್ನು ಕುರಿತಂತೆ ಸ್ವಾಯತ್ತ ಮಹಿಳಾ ಸಂಘಟನೆಗಳಲ್ಲಿ ಈಗಾಗಲೇ ಸಾಕಷ್ಟು ಚರ್ಚೆ ನಡೆದಿದೆ. ಈ ಕುರಿತು ಎರಡು

ರೀತಿಯ ನಿಲುವುಗಳು ಕಂಡುಬಂದಿವೆ. ನಾಗರೀಕ ಸಂಹಿತೆಯ ಪರ ನಿಲುವು ತೆಗೆದುಕೊಂಡ ಸಂಘಟನೆಗಳು, ಸಮಾನ ನಾಗರೀಕ ಸಂಹಿತೆಯ ಸ್ವರೂಪವನ್ನು ಕುರಿತು ಗಂಭೀರವಾಗಿ ಅಧ್ಯಯನ ನಡೆಸಿ ಈಗಾಗಲೇ ಕರಡನ್ನು ಸಿದ್ಧಪಡಿಸಿವೆ.

ಸಮಾನ ನಾಗರೀಕ ಸಂಹಿತೆಯನ್ನು ವಿರೋಧಿಸುವ ಸಂಘಟನೆಗಳು, ಮಹಿಳೆಯರ ಜೀವನವನ್ನು ಸಂಪೂರ್ಣವಾಗಿ ನಿರ್ಧರಿಸುವ ಹಕ್ಕನ್ನು ಸ್ಟೇಟ್ ಕೈಗೆ ನೀಡಿದರೆ ಅದನ್ನು ಅಸ್ತ್ರವಾಗಿ ಬಳಸಬಹುದು ಎಂದು ವಾದಿಸುತ್ತಿವೆ. ಪ್ರಸ್ತುತ ಸಂದರ್ಭದಲ್ಲಿ ಮಹಿಳೆಯರ ಹಿತರಕ್ಷಣೆಯನ್ನು ಮಾಡುವ ಕಾನೂನುಗಳು ವಿಫುಲವಾಗಿದ್ದರೂ, ಸ್ಟೇಟ್ ಹಾಗೂ ಅದರ ಅಂಗಸಂಸ್ಥೆಗಳು ಕೆಲಸ ಮಾಡುತ್ತಿರುವ ವಿಧಾನದಿಂದ ಅವು ಸ್ತ್ರೀಯರ ಹಿತಾಸಕ್ತಿಯನ್ನು ಕಾಪಾಡುವಲ್ಲಿ ವಿಫಲವಾಗಿವೆ.

ಸಮಾಜದಲ್ಲಿ ವಿವಿಧ ಜನಾಂಗಗಳು, ಪಂಗಡಗಳು ತಮ್ಮದೇ ಆದ ವೈವಿಧ್ಯಮಯ ಪದ್ಧತಿ, ಸಂಪ್ರದಾಯಗಳೊಂದಿಗೆ ಜನಜೀವನದೊಂದಿಗೆ ಹೆಣೆದುಕೊಂಡಿವೆ. ಜನಾಂಗದ ವೈವಿಧ್ಯಮಯ ಸಂಪ್ರದಾಯ, ಪದ್ಧತಿಗಳನ್ನು ಕಿತ್ತುಕೊಂಡು ಅವುಗಳನ್ನು ಸ್ಟೇಟ್‌ನ ಕೈಗೆ ಕೊಡುವುದರ ಬದಲಾಗಿ, ಈ ಜನಾಂಗಗಳ ಮೇಲೆ ಬದಲಾವಣೆಗಾಗಿ ಒತ್ತಡ ಹಾಕಬಹುದು. ಈ ಎರಡು ನಿಲುವುಗಳ ಬಗ್ಗೆ ಮಹಿಳಾ ಚಳುವಳಿಯಲ್ಲಿ ಸಾಕಷ್ಟು ದೀರ್ಘವಾದ ಚರ್ಚೆ ನಡೆದಿದೆ. ಮದುರೇಶ್ವರ್‌ರವರ ಅಭಿಪ್ರಾಯಗಳನ್ನು ಸ್ವಾಯತ್ತ ಮಹಿಳಾ ಸಂಘಟನೆಗಳು ಟೀಕಿಸಿವೆ. ಮಾನುಷಿಯಲ್ಲಿ ಪ್ರಕಟವಾದ ಮಧುಕೇಶ್ವರ್ ಅಭಿಪ್ರಾಯ ಅವರದು. ಅವರ ಅಭಿಪ್ರಾಯಗಳು ಸ್ವಾಯತ್ತ ಮಹಿಳಾ ಸಂಘಟನೆಗಳ ಅಭಿಪ್ರಾಯಗಳನ್ನು ಪ್ರತಿನಿಧಿಸಲಾರವು. ಈ ವಿವರಗಳನ್ನು ಗಾಯತ್ರಿಯವರು ಗಮನಿಸಬೇಕಿತ್ತು. ಮಹಿಳಾ ಸಂಘಟನೆಗಳು ತೆಗೆದುಕೊಂಡಿರುವ ನಿಲುವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಬೇಕಿತ್ತು. ವ್ಯಕ್ತಿಗಳು, ಸಂಘಟನೆಗಳ ನಿಲುವುಗಳನ್ನು ಬಾಹ್ಯ ನೋಟದಿಂದ ಸರಳೀಕರಿಸಿ, ಸಾಮಾನ್ಯೀಕರಿಸುವುದು ಮಾಹಿತಿಯ ಕೊರತೆಯನ್ನೂ ಐತಿಹಾಸಿಕವಾಗಿ ದಾಖಲು ಮಾಡುವಾಗ ವಸ್ತುನಿಷ್ಠ ಮನಸ್ಸಿನ ಕೊರತೆಯನ್ನೂ ಎತ್ತಿ ತೋರಿಸುತ್ತದೆ.

ಸ್ವಾಯತ್ತ ಮಹಿಳಾ ಸಂಘಟನೆಗಳು ನಮ್ಮ ನಡುವೆ ಚಾಲ್ತಿಯಲ್ಲಿರುವ ಎಲ್ಲಾ ರಚನೆಗಳು ಪುರುಷ ರೂಪಿತವೆಂದು, ಪುರುಷನ ಅಗತ್ಯಕ್ಕೆ ತಕ್ಕಂತೆ ನಿರ್ಮಾಣಗೊಂಡವೆಂದು ಬಗೆಯುತ್ತಾರಾದ್ದರಿಂದ, ಇವೆಲ್ಲದರಿಂದ ಮುಕ್ತವಾದ ಸ್ತ್ರೀ ಸಂಸ್ಕೃತಿಯ ರಚನೆಗಳನ್ನು ರೂಪಿಸಿಕೊಳ್ಳಬೇಕೆಂಬುದು ಅವುಗಳ ಆಶಯವಾಗಿದೆ ಎಂದು ಹೇಳುತ್ತಾರೆ. ಸಮಾಜದಲ್ಲಿ ಚಾಲ್ತಿಯಲ್ಲಿರುವ ಎಲ್ಲಾ ರಚನೆಗಳು ಪುರುಷ ನಿರ್ಮಿತ ವಾದುದೆಂಬುದು ಐತಿಹಾಸಿಕ ಸತ್ಯ. ಆದರೆ ಮಹಿಳಾ ಸಂಘಟನೆಗಳು ರಚನೆಯ ಶ್ರೇಣೀಕೃತ, ಬಿಗಿ ವ್ಯವಸ್ಥೆಯ ಬಗ್ಗೆ ಎತ್ತಿರುವ ತಾತ್ವಿಕ ಪ್ರಶ್ನೆಗಳು ಪುರುಷ ರಚನೆ, ಸ್ತ್ರೀ ಸಂಸ್ಕೃತಿಯ ರಚನೆ ಎಂಬ ವ್ಯಾಖ್ಯಾನವನ್ನೂ ಮೀರಿದ ಪ್ರಶ್ನೆಗಳಾಗಿವೆ. ಸಾಮೂಹಿಕ ಜವಾಬ್ದಾರಿ ಹಾಗೂ ನಾಯಕತ್ವದ ಪರಿಕಲ್ಪನೆ ಸ್ತ್ರೀಯರ ಜೀವನ ಶೈಲಿಗೆ ಆತ್ಮೀಯವಾದ ಹಾಗೂ ಹತ್ತಿರ ವಾಗಬಹುದಾದ ರಚನೆ. ಇದನ್ನು ಸ್ತ್ರೀ ಸಂಸ್ಕೃತಿಯ ರಚನೆ ಯೆಂದು ವ್ಯಾಖ್ಯಾನಿಸುವ ಪ್ರಯತ್ನವನ್ನು ಸ್ವಾಯತ್ತ ಮಹಿಳಾ ಸಂಘಟನೆಗಳು ಮಾಡಿವೆ ಎಂಬ ಅರಿವು ನಮಗಿಲ್ಲ. ಗಾಯತ್ರಿಯವರು ತಮ್ಮ ವಾದವನ್ನು ಕಾರ್ಯಕರ್ತೆಯೊಬ್ಬರು ಸಭೆಯಲ್ಲಿ ಮೈಕ್ ಬೇಡವೆಂದು ಹೇಳಿದ ಘಟನೆಯ ನಿದರ್ಶನ ದಿಂದ ಸಮರ್ಥಿಸುವುದು ಬಾಲಿಶವಾಗಿದೆ. ಇನ್‌ಫಾರ್ಮಲ್ ಆದ ವಾತಾವರಣದಲ್ಲಿ ಮುಕ್ತವಾಗಿ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಬಹುದೆಂಬ ವ್ಯಕ್ತಿಯ ಆಶಯದ ಮೂಲಕ ಒಟ್ಟು ರಚನೆಯ ಬಗ್ಗೆಯೇ ತೀರ್ಮಾನಕ್ಕೆ ಲೇಖಕಿಯು ಬಂದಿರುವುದು ಅವರ ವಾದದ ಮಿತಿಯನ್ನು ತೋರಿಸುತ್ತದೆ.

ಗೃಹಕತ್ಯದ ಬಗೆಗಿನ ಗಾಯತ್ರಿಯವರ ನಿಲುವು ಅಪಾಯಕಾರಿಯಾದುದು. ಪಾಶ್ಚಾತ್ಯ ಮಹಿಳಾ ಚಳುವಳಿಕಾರರು ಗೃಹಕೃತ್ಯಕ್ಕೆ ಕೂಲಿ ಕೊಡಿಸುತ್ತೇವೆಂದು ಮಾನವೀಯ ಮೌಲ್ಯಕ್ಕೆ ಕೈಹಾಕಿದರು ಎಂದು ಬರೆಯುತ್ತಾರೆ. ಗೃಹಕೃತ್ಯದ ಎಲ್ಲಾ ಕೆಲಸಗಳಿಗೆ ಕೂಲಿ ಸಿಗುವುದಾದರೆ ತಾಯಿ, ಪತ್ನಿಯರ ಅವಶ್ಯಕತೆ ಇಲ್ಲವೆಂದು ಬರೆಯುತ್ತಾರೆ. ಮಾನವೀಯ ಸಂಬಂಧಗಳು ಕೂಡ ಕೊಳ್ಳುವ ವ್ಯವಹಾರ ಅಲ್ಲ ಎನ್ನುವ ಇವರು ಗೃಹಕೃತ್ಯಕ್ಕೆ ಕೂಲಿ ಕೇಳುವುದೆಂದರೆ ಮಾನವೀಯ ಸಂಬಂಧದ ವ್ಯಾಪಾರೀಕರಣ ಎನ್ನುತ್ತಾರೆ. "ಗೃಹಕೃತ್ಯದ ಆರ್ಥಿಕ" ಬೆಲೆಯ ಬಗ್ಗೆ ಸಾಕಷ್ಟು ವಿವರವಾಗಿ ಚರ್ಚೆ ನಡೆದಿದೆ. ಬೇಡಿಕೆಯ ಸ್ವರೂಪದ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಗೃಹಕೃತ್ಯಕ್ಕೆ ಆರ್ಥಿಕ ಬೆಲೆ ಕಟ್ಟುವ, ಶ್ರಮವೆಂದು ಗುರುತಿಸುವ ವಾದದಲ್ಲಿ ಹುರುಳಿದೆ. ಆರ್ಥಿಕ ಮೌಲ್ಯವನ್ನು ನೀಡಿದಾಕ್ಷಣ ಮಾನವೀಯ ಸಂಬಂಧಗಳು ವ್ಯಾಪಾರೀಕರಣವಾಗುತ್ತವೆಯೆನ್ನುವುದಾದರೆ, ಇಂದಿನ ಕೌಟುಂಬಿಕ ಸಂಬಂಧಗಳು ವ್ಯಾಪಾರೀಕರಣದ ನೆಲೆಯಲ್ಲೇ ನಡೆಯುತ್ತಿವೆ. ಈ ಶ್ರಮವನ್ನು ಆರ್ಥಿಕ ನೆಲೆಯಿಂದ ವಿವೇಚಿಸಬೇಕಾಗುತ್ತದೆ ಎಂದಾಕ್ಷಣ ಮಾನವೀಯ ಮೌಲ್ಯಗಳು ನಾಶವಾಗಿ ಬಿಡುವುದಾದರೆ, ಹೆಂಡತಿ, ತಾಯಿ, ಅಕ್ಕ-ತಂಗಿಯರ ಪವಿತ್ರ ಕಲ್ಪನೆಗಳು ನಾಶವಾಗಿ ಬಿಡುವುದಾದರೆ ಈ ಮಾನವೀಯ ಮೌಲ್ಯಗಳ ನೆಲೆಯೇನು ಎಂಬ ಮೂಲಭೂತ ಪ್ರಶ್ನೆಯನ್ನು ಕೇಳಬೇಕಾಗುತ್ತದೆ. ಗೃಹಕೃತ್ಯ ಮತ್ತು ಅದರ ಆರ್ಥಿಕ ನೆಲೆ,

ಬೇಡಿಕೆಗಳು ಇವುಗಳ ಚರ್ಚೆಯ ನೆಲೆಯೇ ಬೇರೆ. ಇವುಗಳನ್ನು ತಾಯಿ, ಹೆಂಡತಿ, ಅಕ್ಕ ತಂಗಿಯರ ಪಾತ್ರಗಳಿಗೆ ಸಮೀಕರಿಸುವುದರ ಮೂಲಕ ಗಾಯತ್ರಿಯವರು ಕುಟುಂಬದಲ್ಲಿ ಪಿತೃಪ್ರಧಾನ ವ್ಯವಸ್ಥೆ ಸ್ತ್ರೀಯರಿಂದ ನಿರೀಕ್ಷಿಸುವ ಮೌಲ್ಯಗಳನ್ನು ಸಮರ್ಥಿಸುತ್ತಿದ್ದಾರೆ. ಕುಟುಂಬದಲ್ಲಿ ಗಂಡುಮಕ್ಕಳ ನಡುವೆ ಆಸ್ತಿ ಹಂಚಿಕೆ, ವೈಷಮ್ಯ, ಸ್ತ್ರೀಯರ ಆಸ್ತಿಹಕ್ಕನ್ನು ರಕ್ಷಿಸುವ ಕಾನೂನಿದ್ದರೂ ಆಸ್ತಿಯ ವಂಚನೆ, ಮುಂತಾದ ಸಂದರ್ಭದಲ್ಲಿ ಮಾನವೀಯ ನೆಲೆ ಏನು ಎಂಬುದನ್ನು ಸಹ ಪ್ರಶ್ನಿಸಬೇಕಾಗುತ್ತದೆ. ಮಾನವೀಯ ನೆಲೆಯನ್ನು ತಾಯಿ, ಹೆಂಡತಿ, ಅಕ್ಕ ಸಹೋದರಿಯರ ಪಾತ್ರಕ್ಕೆ ಮಾತ್ರ ಏಕೆ ಸೀಮಿತಗೊಳಿಸಬೇಕು?

ಪುಸ್ತಕದಲ್ಲಿ ಕೆಲವು ಸಂಗತಿಗಳನ್ನು ಉಲ್ಲೇಖ ಮಾಡದಿರುವುದು ಆಶ್ಚರ್ಯಕರವಾಗಿದೆ. ಸಿ.ಪಿ.ಐ.ನ ಮಹಿಳಾ ವಿಭಾಗ, ಮಹಿಳಾ ಸಾಂಸ್ಕೃತಿಕ ಸಂಘಟನೆಯ ಚಟುವಟಿಕೆಗಳನ್ನು ಲೇಖಕಿ ಗುರುತಿಸುವುದಿಲ್ಲ. ಸಮಾನ ನಾಗರೀಕ ಸಂಹಿತೆಯ ಬಗ್ಗೆ ಅಪಾರವಾದ ಚರ್ಚೆಯನ್ನು ಎಬ್ಬಿಸಿದ ಶಾಬಾನು ಪ್ರಕರಣವನ್ನು ಲೇಖಕಿ ಉಲ್ಲೇಖಿಸುವುದೂ ಇಲ್ಲ. ಸ್ವಾಯತ್ತ ಸಂಘಟನೆಯಾದ ಸಹೇಲಿಯಂತಹ ಸಂಘಟನೆಯ ಕೆಲಸಗಳನ್ನು ಒಂದೆರೆಡು ಸಾಲಿನಲ್ಲಿ ವರದಿ ಮಾಡಲಾಗಿದೆ. ಸ್ವಾಯತ್ತ ಪರಿಕಲ್ಪನೆಯನ್ನು ಬಲವಾಗಿ ನಂಬಿಕೊಂಡುದರ ಜೊತೆಜೊತೆಯಲ್ಲಿಯೇ ಎಡ ಮತ್ತು ಪ್ರಜಾಸತ್ತಾತ್ಮಕ ಪಕ್ಷ ಹಾಗೂ ಗುಂಪುಗಳೊಂದಿಗೆ ಆರೋಗ್ಯಪೂರ್ಣ ಸಂಬಂಧ ಇಟ್ಟುಕೊಂಡು ಸಂಯುಕ್ತವಾಗಿ ಕೆಲಸ ಮಾಡುವ, ಸ್ಪಂದಿಸುವ ಸಮಸ್ಯೆಗಳ ಬಗ್ಗೆ ಲೇಖಕಿಯರಿಗೆ ಮಾಹಿತಿ ಇದ್ದಂತಿಲ್ಲ. ನರ್ಮದಾ ಬಚಾವ್ ಆಂದೋಲನ, ಮಹಾಶ್ವೇತಾದೇವಿಯವರು ಕ್ರಿಯಾಶೀಲರಾಗಿ ತಮ್ಮನ್ನು ತೊಡಗಿಸಿಕೊಂಡ ಆದಿವಾಸಿ ಹೋರಾಟದ ಬಗ್ಗೆ ಲೇಖಕಿಯ ಅಭಿಪ್ರಾಯಗಳು ವ್ಯಕ್ತವಾಗುವುದಿಲ್ಲ.

ದ್ರಾವಿಡ ಚಳುವಳಿಯ ಪ್ರಾರಂಭದಲ್ಲಿನ ಮಹಿಳೆಯರ ಬಗ್ಗೆ ಆರೋಗ್ಯಪೂರ್ಣ ನಿಲುವು ಕ್ರಮೇಣ ಅದರ ಕೇಂದ್ರವಸ್ತುವನ್ನು ಮರೆತ ದುರಂತದ ಬಗ್ಗೆ ಗುರುತಿಸುವ ಲೇಖಕಿ, ತೆಲಂಗಾಣ ಹೋರಾಟ, ರಾಷ್ಟ್ರೀಯ ಚಳುವಳಿಯ ಅಂತ್ಯದಲ್ಲಿ ಮಹಿಳೆಯರ ಪಾತ್ರಕ್ಕೆ ಸ್ಥಾನಮಾನವನ್ನು ಗುರುತಿಸುವಲ್ಲಿ ವಿಫಲರಾಗುತ್ತಾರೆ. ವಿದೇಶಿ ನೆರವಿನ ಸಂಘಟನೆಗಳ ಬಗ್ಗೆ ಕಟುವಿಮರ್ಶೆ ಮಾಡುವ ಜನವಾದಿ ಮಹಿಳಾ ಸಂಘಟನೆ ರಾಷ್ಟ್ರೀಯ ಮಟ್ಟದಲ್ಲಿ ವಿದೇಶಿ ನೆರವು ಪಡೆಯುತ್ತಿದೆ ಎನ್ನಲಾದ ಜಾಯಿಂಟ್ ವಿಮೆನ್ಸ್ ಪ್ರೋಗ್ರಾಮ್ ಜೊತೆ ಕೆಲಸ ಮಾಡುವಾಗ ವಿರೋಧಾಭಾಸಗಳು ಕಂಡುಬರುತ್ತವೆ.

ರಾಂಚಿಯಲ್ಲಿ ನಡೆದ ಮಹಿಳಾ ಸಮಾವೇಶದ ಬಗ್ಗೆಯು ಅವಸರದ ಕೆಲವು ತೀರ್ಮಾನಗಳನ್ನು ಮಾಡಿ ಉಲ್ಲೇಖಿಸಲಾಗಿದೆ. ರಾಂಚಿಯಲ್ಲಿ ನಡೆದದ್ದು 6ನೇ ರಾಷ್ಟ್ರೀಯ ಸ್ವಾಯತ್ತ ಮಹಿಳಾ ಸಮಾವೇಶವಲ್ಲ. ಅದು 6ನೇಯ ರಾಷ್ಟ್ರೀಯ ಮಹಿಳಾ ಸಮಾವೇಶ. ಈ ಸಮಾವೇಶದಲ್ಲಿ ವಿದೇಶಿ ನೆರವು ಪಡೆಯುವ ಸ್ವಯಂ ಸೇವಾ ಸಂಸ್ಥೆಗಳು, ಸ್ವಾಯತ್ತ ಮಹಿಳಾ ಸಂಘಟನೆಗಳು, ಎಡ ಪಕ್ಷದ ಮಹಿಳಾ ಘಟಕಗಳು, ಜಾರ್‌ಖಂಡ್ ಮತ್ತು ಮೋರ್ಚಾ, ಛತ್ತೀಸ್ ಘಡ್ ಸಂಘಟನೆ, ಆದಿವಾಸ ಸಂಘಟನೆಗಳು ಈ ಸಮಾವೇಶದಲ್ಲಿ ಭಾಗ ವಹಿಸಿದ್ದವು. ಪಕ್ಷ ರಾಜಕೀಯ ಮಿತಿಯ ಹೊರನೋಟದಿಂದ ಈ ಸಮಾವೇಶದಲ್ಲಿ ಕಂಡುಬಂದ ವಿರೋಧಾಭಾಸಗಳೂ ಸಹ ಚರ್ಚಿತವಾಗಿದೆ. ಈ ಸಮಾವೇಶದ ಸಿದ್ಧತಾ ಸಭೆಗಳ ನಡಾವಳಿ ಮೌಲ್ಯಮಾಪನ ಸಭೆಯ ನಡಾವಳಿಗಳಲ್ಲಿ ಇವು ಸ್ಪಷ್ಟವಾಗಿ ಮೂಡಿಬಂದಿವೆ.

ಮಹಿಳಾ ಸಂಘಟನೆಗಳ ಕಾರ್ಯಸ್ವರೂಪವನ್ನು ಅವು ನ್ಯಾಯಾಂಗವನ್ನು ಹೇಗೆ ನೋಡುತ್ತವೆ ಎನ್ನುವ ಆಧಾರದ ಮೇಲೆ ನಿರ್ಧರಿಸುವುದು ಸಹ ಅಪರಿಪೂರ್ಣ ಮಾನದಂಡವಾಗುತ್ತದೆ. ಇವುಗಳನ್ನು ವಿವಿಧ ಸಂಘಟನೆಗಳು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸುವುದು, ಒತ್ತುನೀಡುವುದು ಕಂಡುಬರುತ್ತಿದೆ. ಒಂದು ಸಂಘಟನೆಯ ಕಾರ್ಯವೈಖರಿಯ ಸ್ವರೂಪವನ್ನು ಗುರುತಿಸಲು, ಅವುಗಳ ರಾಜ್ಯವ್ಯವಸ್ಥೆ, ಆರ್ಥಿಕ ಸಂಬಂಧ ಮುಂತಾದ ಮೂಲಭೂತ ವಿಚಾರಗಳನ್ನು ಗಮನಿಸಬೇಕಾಗುತ್ತದೆ.

ಒಟ್ಟಾರೆ ಪಕ್ಷ ರಾಜಕೀಯದಿಂದ ಹೊರತುಪಡಿಸಿದ ಯಾವುದೇ ಹೋರಾಟವನ್ನು ಈ ಕೃತಿಯು ಅಸಹನೆಯಿಂದ ನೋಡಿರುವುದು ಕಂಡುಬರುತ್ತದೆ. ನವವಸಾಹತುಶಾಹಿಯ ವಿರುದ್ಧ ಹೋರಾಡುವ ಪಕ್ಷ ರಾಜಕೀಯದಲ್ಲಿ ನಂಬಿಕೆಯಿರುವ ಚಳುವಳಿಗೆ ಮಾತ್ರ ಸ್ಪಷ್ಟವಾದ ಉದ್ದೇಶ, ಗುರಿ ಇರುತ್ತದೆ ಎನ್ನುವ ಗಾಯತ್ರಿಯವರು ವಿಷಯ ಸಂಕೀರ್ಣತೆಯನ್ನು ಗಮನಿಸುವಲ್ಲಿ ಅಪಾರವಾದ ನಿರ್ಲಕ್ಷ್ಯವನ್ನು ತೋರಿದ್ದಾರೆಂದು ಅನ್ನಿಸುತ್ತದೆ. ಪಕ್ಷ ರಾಜಕೀಯ ಮಿತಿಯ ಹೊರನೋಟದಿಂದ ವಿಶ್ಲೇಷಿರುವುದರ ಜೊತೆಗೆ ಅವಶ್ಯಕವಾದ ಅಧ್ಯಯನದ ಕೊರತೆಯನ್ನೂ ಈ ಕೃತಿ ಬಿಂಬಿಸುತ್ತದೆ.

- ಮಾನಸ

ಮಾನಸ ತಲುಪಿದ ಕೂಡಲೆ ನಿಮ್ಮ ಅಭಿಪ್ರಾಯಗಳನ್ನು ವಿವರವಾಗಿ ಬರೆದು ಚರ್ಚೆಗೆ ಅನುವು ಮಾಡಿಕೊಡಿ.

# ಯಾರದೋ ತಪ್ಪಿಗೆ, ದ್ವೇಷಕ್ಕೆ ಹೆಣ್ಣಿನ ಮೇಲೆ ಅತ್ಯಾಚಾರವೆ?

ಯುದ್ಧ, ಜಾತಿ ವೈಷಮ್ಯ, ಜನಾಂಗ ಕಲಹ ಮುಂತಾದ ಸಂದರ್ಭದಲ್ಲಿ ಸ್ತ್ರೀಯರ ಮೇಲೆ ಪುರುಷ ಅತ್ಯಾಚಾರವೆಸಗುವುದಕ್ಕೆ ಕಾರಣ ಪುರುಷನ ಕಾಮನೆಯಾಲಿ, ಅವನ ವಿಕೃತ ಮನಸ್ಸಾಗಲಿ ಅಲ್ಲ. ಸ್ತ್ರೀಯರ ಮೇಲೆ ಅತ್ಯಾಚಾರವನ್ನುವೆಸುಗುವುದರ ಮೂಲಕ ತಮ್ಮ ಶತ್ರುಗಳ ಮೇಲೆ ಸೇಡು, ಪ್ರತೀಕಾರವನ್ನು ತೀರಿಸಿಕೊಳ್ಳುತ್ತಾರೆ. ನಮ್ಮ ದೇಶದಲ್ಲಿ ಇಂತಹ ಸಂದರ್ಭಗಳಲ್ಲಿ ಸ್ತ್ರೀಯರನ್ನು ಪಗಡೆಯಾಟದ ದಾಳಗಳಂತೆ ಬಳಸಿಕೊಳ್ಳಲಾಗುತ್ತಿದೆ. ಸ್ತ್ರೀಯರ ಮೇಲೆ ಅತ್ಯಾಚಾರ ವೆಸಗುವುದು ಅಪರಾಧವಾಗುವುದರ ಬದಲು ವಿಜಯದ, ಯಶಸ್ಸಿನ ಸಂಕೇತವಾಗುತ್ತದೆ. ಸ್ತ್ರೀಯರ ಮೇಲೆ ಅತ್ಯಾಚಾರವೆಸಗುವುದರ ಮೂಲಕ ಅವಳ ಜನಾಂಗಕ್ಕೆ ಸಂದೇಶವನ್ನು ಕಳಿಸಲಾಗುತ್ತದೆ. ಅವಳ ಮೇಲೆ ನಡೆಯುವ ಅಮಾನವೀಯ ಅತ್ಯಾಚಾರ ಒಂದು ಜನಾಂಗದ ಆತ್ಮಗೌರವವನ್ನು ಕೆಣಕುತ್ತದೆ. ಅತ್ಯಾಚಾರವೆಸಗುವವರ ಉದ್ದೇಶವು ಅದಾಗಿರುತ್ತದೆ. ನಮ್ಮ ಸಮಾಜದ ಸ್ತ್ರೀಯರ ಮೇಲೆ ನಡೆದ ಲೈಂಗಿಕ ಅತ್ಯಾಚಾರದ ಪ್ರಕರಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಇಂತಹ ನಿದರ್ಶನಗಳು ಕಣ್ಣಿಗೆ ರಾಚುವಂತೆ ಕಂಡುಬರುತ್ತವೆ.

ಸ್ತ್ರೀಯರ ಮನಸ್ಸಿನ ವಿರುದ್ಧ ಬಲಾತ್ಕಾರದಿಂದ, ಪುರಷ ತನ್ನ ಜನನೇಂದ್ರಿಯವನ್ನು ಅಸ್ತ್ರವಾಗಿ ಬಳಸುವುದರಿಂದ ಅವಳ ವ್ಯಕ್ತಿತ್ವದ ಮೇಲೆ ಬೀರುವ ಅಮಾನವೀಯ ಪರಿಣಾಮಗಳು ಇಂದಿನ ನಮ್ಮ ಸಾಮಾಜಿಕ, ಧಾರ್ಮಿಕ, ಆರ್ಥಿಕ ರಚನೆಯ ಹಿನ್ನೆಲೆಯಲ್ಲಿ ನಗಣ್ಯವಾಗಿಬಿಡುತ್ತಿವೆ. ಸಾಂಪ್ರದಾಯಕ ಮೌಲ್ಯಗಳ ಹಿನ್ನಲೆಯಲ್ಲಿ ಆಕೆ ಅನುಭವಿಸುವ ಹಿಂಸೆ ವರ್ಣಿಸಲು, ಅಸಾಧ್ಯವಾದುದು. ಅವಳ ಸಂಪೂರ್ಣ ವ್ಯಕ್ತಿತ್ವವೇ ಘಾಸಿಗೊಳ್ಳುತ್ತದೆ. ಅತ್ಯಾಚಾರವೇ ಒಂದು ಪಾಶವೀಕೃತ್ಯ ವಾದರೆ, ನಂತರ ಅನುಭವಿಸುವ ನೋವು ಭಯಾನಕವಾದುದು, ಘೋರವಾದುದು.

ಮಧ್ಯಪ್ರದೇಶದ ಜಬುವಾ ಜಿಲ್ಲೆಯ ಬಂಡಾರಿಯಾ ಗ್ರಾಮದ ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆದ ಅತ್ಯಾಚಾರ ಪೂರ್ವಯೋಜಿತ, ಪೈಶಾಚಿಕ ಮನಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಸತ್ತ ಮಾನವೀಯತೆಯ ಘೋರ ಕೃತ್ಯವಾಗಿದೆ. ಕ್ರೈಸ್ತ ಸನ್ಯಾಸಿನಿಯರು ಎಳೆಯ ವಯಸ್ಸಿನಲ್ಲಿ ಮನೆಯನ್ನು ತೊರೆದು, ತಮ್ಮ ಧರ್ಮದ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು. ದೂರದೂರಿನಿಂದ ಬಂದು ಸಂಪೂರ್ಣವಾಗಿ ಅಪರಿಚಿತ ವಾತಾವರಣದಲ್ಲಿ ಬದುಕುತ್ತಿರುವವರು. ಬಂಡಾರಿಯ ಗ್ರಾಮದ ಸ್ಥಳೀಯ ಜನರೊಂದಿಗೆ ವಿಶೇಷವಾಗಿ ಆದಿವಾಸಿ ಜನರೊಟ್ಟಿಗೆ ಕೆಲಸ ಮಾಡುತ್ತಿದ್ದರು. ಶಾಲೆಯನ್ನು ನಡೆಸುವುದರೊಂದಿಗೆ ವೈದ್ಯಕೀಯ ನೆರವನ್ನು ಸಹ ನೀಡುತ್ತಿದ್ದ ಇವರಿಗೆ ಗ್ರಾಮದ ಜನರೊಡನೆ ಯಾವುದೇ ರೀತಿಯ ಸಂಘರ್ಷದ ಸನ್ನಿವೇಶಗಳು ಎದುರಾಗಿರಲಿಲ್ಲ.

ಸೆಪ್ಟೆಂಬರ್ 23ರಂದು ನಡೆದ ಘಟನೆಯನ್ನು ಸಾಮೂಹಿಕ ಅತ್ಯಾಚಾರಕ್ಕೆ ಒಳಗಾದ ಸಂನ್ಯಾಸಿನಿಯೊಬ್ಬರು ಹೀಗೆ ವಿವರಿಸುತ್ತಾರೆ: ಸೆಪ್ಟೆಂಬರ್ 22ರ ರಾತ್ರಿ 10-30ಕ್ಕೆ ಸುಮಾರು ಹತ್ತು ಜನರು ಆಶ್ರಮದ ಕಡೆ ನಡೆದು ಬರುತ್ತಿದ್ದರು. ಅವರಲ್ಲೊಬ್ಬ ಕಲ್ಲನ್ನು ಆಶ್ರಮದ ನಾಯಿಯ ಕಡೆ ಬೀಸಿದ. ಸುಮಾರು 11ಗಂಟೆಯವರೆಗೆ ಗದ್ದಲ ನಡೆಯುತ್ತಲೇ ಇತ್ತು. ರಾತ್ರಿ ಎರಡು ಗಂಟೆಯಲ್ಲಿ ಪುನಃ ಕಾಲಿಂಗ್‌ಬೆಲ್ ಅನ್ನು ಒತ್ತಲಾಯಿತು. ನಾನು ಕೋಣೆಯಿಂದ ಈಚೆ ಬಂದು ನೋಡುತ್ತಿದ್ದ ಹಾಗೆ, ಕಬ್ಬಿಣದ ಸಲಾಕೆಯಿಂದ ಬಾಗಿಲನ್ನು ಒಡೆಯತೊಡಗಿದರು. ಕೆಲವರು ಬಾಗಿಲು ತೆಗೆಯಲು ಒತ್ತಾಯಿಸುತ್ತಿದ್ದರು. ಐದಾರು ಜನರು ಕಬ್ಬಿಣದ ಸಲಾಕೆಯನ್ನು ಹಿಡಿದುಕೊಂಡಿದ್ದರು. ಮಗು ರಕ್ತ ಕಾರುತ್ತಿದೆ. ಔಷಧಿ ಕೊಡಬೇಕೆಂದು ಕೂಗಿದರು. ಸ್ಥಳೀಯ ಪಾದ್ರಿಯಿಂದ ಪತ್ರವನ್ನು ತೆಗೆದುಕೊಂಡು ಬನ್ನಿ ಅಥವಾ ಯಾರಾದರೂ ಹೆಂಗಸರನ್ನು ಕರೆದುಕೊಂಡು ಬನ್ನಿ ಎಂದು ಹೇಳಿದೆ. ನಮ್ಮ ಬಳಿ ಇದ್ದ ಸೀಟಿಯನ್ನು 10-15 ಬಾರಿ ಊದಿದೆ. ಕಾವಲುಗಾರ ಅಥವಾ ಯಾರಾದರೂ ನೆರವಿಗೆ ಬರಬಹುದೆಂದು ಕಾದೆವು. ಆದರೆ ಯಾರೂ ಬರಲಿಲ್ಲ. ಆಶ್ರಮದ ಸರಳುಗಳನ್ನು ಮುರಿಯ ತೊಡಗಿದರು. ನಾನು ಇತರರನ್ನು ಕರೆದುಕೊಂಡು ಚಾಪೆಲಳ ಬಳಿ ಹೋಗಿ ಪ್ರಾರ್ಥನೆ ಮಾಡತೊಡಗಿದೆವು. ಸರಳುಗಳನ್ನು ಮುರಿದು ಅವರು ಒಳಗೆ ಬಂದರು. ಅವರನ್ನು ಕುರಿತು ನಿಮಗೆ ಬೇಕಾದುದನ್ನು ತೆಗೆದುಕೊಂಡು ಹೋಗಿ ಎಂದು ಪ್ರಾರ್ಥಿಸ ತೊಡಗಿದೆವು. ನಿಮಗೆ ಏನೂ ಮಾಡುವುದಿಲ್ಲ, ಹಣ ಕೊಡಿ ಎಂದರು. ನಮ್ಮ ಬಳಿ ಹಣವಿಲ್ಲವೆಂದು ಹೇಳಿದೆವು. ಇಬ್ಬರು

ನನ್ನ ಕುತ್ತಿಗೆಯನ್ನು, ಇನ್ನೊಬ್ಬರು ನನ್ನ ಕೈಯನ್ನು ಹಿಡಿದುಕೊಂಡರು. ನಮ್ಮನ್ನೆಲ್ಲಾ ಹೊರಗೆ ಎಳೆದುಕೊಂಡು ಹೋದರು.

ಒಬ್ಬ ಸಂನ್ಯಾಸಿನಿಯನ್ನು 6 ಜನ ಹೊರಗಳೆದುಕೊಂಡು ಹೋದರು. ಅವಳು ಕೂಗಾಡುತ್ತಿದ್ದಳು. ಇನ್ನೊಬ್ಬ ಸಂನ್ಯಾಸಿನಿಯನ್ನು ಇಬ್ಬರು ಎಳೆದುಕೊಂಡು ಹೋದರು. ಅವರ ಬಳಿ ಹೋಗಿ ಅವಳನ್ನು ಬಿಟ್ಟು ಬಿಡುವಂತೆ ಪರಿಪರಿಯಾಗಿ ಕೇಳಿಕೊಂಡೆ. ಆಕೆ ಕಳೆದ ವರ್ಷ ತಾನೇ ನಮ್ಮ ಆಶ್ರಮಕ್ಕೆ ಬಂದಿದ್ದರು. ಎಲ್ಲರನ್ನು ಆಶ್ರಮದ ಹೊರಗೆ ಕತ್ತಲಲ್ಲಿ ಪೊದೆಗಳ ಬಳಿಗೆ ಎಳೆದುಕೊಂಡು ಹೋದರು. ಒಬ್ಬ ಸನ್ಯಾಸಿನಿಯನ್ನು ನಾಲ್ಕು ಜನ, ಇನ್ನೊಬ್ಬರನ್ನು ಇಬ್ಬರು, ಮೂರನೆಯವರ ಸುಳಿವು ಸಿಗಲಿಲ್ಲ. ನನ್ನ ಬಟ್ಟೆಗಳನ್ನು ಎಳೆದರು. ಒಂದು ಗಂಟೆಗಿಂತ ಹೆಚ್ಚು ನಾನು ಅವರ ಬಳಿ ಸೆಣಸಾಡಿದೆ.

ಪಾರಿಶ್ ಪಾದ್ರಿಯವರು ಕೆಲಸದ ಮೇಲೆ ಹೊರಗೆ ಹೋದ ಸಂದರ್ಭದಲ್ಲಿ ಸಂನ್ಯಾಸಿನಿಯರ ಮೇಲೆ ಸಾಮೂಹಿಕ ಅತ್ಯಾಚಾರವನ್ನು ಎಸಗಲಾಗಿದೆ. ಪಾದ್ರಿಯ ಮನೆಗೂ ಇವರು ವಾಸಿಸುತ್ತಿದ್ದ ಆಸ್ಪತ್ರೆಗೂ ಸುಮಾರು ಅರ್ಧ ಕಿಲೋಮೀಟರ್ ದೂರ. ಸಂನ್ಯಾಸಿನಿಯರ ಬಳಿ ಅವರನ್ನು ರಕ್ಷಿಸಿಕೊಳ್ಳಲು ಯಾವುದೇ ಆಯುಧ ಇರಲಿಲ್ಲ. ಫೋನ್ ಸೌಲಭ್ಯ ಸಹ ಇರಲಿಲ್ಲ. ಅವರಿಗಿದ್ದ ಒಂದೇ ಭರವಸೆಯೆಂದರೆ, ತಾವು ನಿಸ್ಪೃಹತೆಯಿಂದ ಸೇವೆ ಸಲ್ಲಿಸಿದ್ದ ಜನರು, ಅಥವಾ ಕಾವಲುಗಾರ. ಆದರೆ ಅವರ ನೆರವಿಗೆ ಯಾರೂ ಧಾವಿಸಲಿಲ್ಲ.

ದುಷ್ಕರ್ಮಿಗಳು ಸೆಪ್ಟೆಂಬರ್ 23ರ ಮುಂಜಾನೆ 2ರಿಂದ 4ಗಂಟೆಯ ಒಳಗೆ ಅತ್ಯಾಚಾರವನ್ನು ಎಸಗಿದರೆನ್ನಲಾಗಿದೆ. ಗೋಪಾಲಪುರದ ಪಾದ್ರಿಗೆ ವಿಷಯ ತಿಳಿದಾಗ 7ಗಂಟೆ. ಕಲ್ಯಾಣಪುರ ಪೊಲೀಸ್ ಠಾಣೆಯಲ್ಲಿ ನೀಡಿದ ದೂರಿನಲ್ಲಿ ಅತ್ಯಾಚಾರದ ವಿಷಯವನ್ನು ದಾಖಲಿಸಲಿಲ್ಲ. ಕೇವಲ ಲೂಟಿ ಮಾಡಿದ ಸಂಗತಿಯನ್ನು ಮಾತ್ರ ತಿಳಿಸಲಾಗಿತ್ತು. ಆದರೆ ಪೊಲೀಸರು ವಿವರವಾಗಿ ತನಿಖೆಯನ್ನು ಮಾಡುವ ಸಂದರ್ಭದಲ್ಲಿ ಅಂದರೆ ಸುಮಾರು 11ಗಂಟೆಯಲ್ಲಿ ಸಾಮೂಹಿಕ ಅತ್ಯಾಚಾರದ ವಿಷಯವನ್ನು ಪೊಲೀಸರಿಗೆ ತಿಳಿಸಲಾಯಿತು. 4 ಗಂಟೆಯಲ್ಲಿ ನ್ಯಾಯಾಧೀಶರು ಸಂನ್ಯಾಸಿನಿಯರ ಹೇಳಿಕೆಗಳನ್ನು ದಾಖಲಿಸ ತೊಡಗಿದರು. 8 ಗಂಟೆಯ ಹೊತ್ತಿಗೆ ವೈದ್ಯಕೀಯ ಪರೀಕ್ಷೆಯನ್ನು ನಡೆಸಲಾಯಿತು. ಈ ಹೊತ್ತಿಗಾಗಲೇ ಸಂನ್ಯಾಸಿನಿಯರು ಅವರು ತೊಟ್ಟ ಬಟ್ಟೆಗಳನ್ನು ಬದಲಾಯಿಸಿದ್ದರು. ಒಬ್ಬರನ್ನು ಬಿಟ್ಟು ಉಳಿದ ಮೂರು ಜನರ ಮೇಲೆ ಅತ್ಯಾಚಾರ ನಡೆದುದರ ಬಗ್ಗೆ ವೈದ್ಯಕೀಯ ವರದಿಯಲ್ಲಿ ಸ್ಪಷ್ಟವಾಗಿ ಹೇಳಲಾಗಲಿಲ್ಲ. ಸೆಪ್ಟೆಂಬರ್ 25ರಂದು ಇಂದೂರಿನ ವೈದ್ಯಕೀಯ ತಂಡವೊಂದು ಪುನಃ ವೈದ್ಯಕೀಯ ಪರೀಕ್ಷೆಯನ್ನು ನಡೆಸಿ ಮೂರು ಜನರ ಮೇಲೆ ಅತ್ಯಾಚಾರ ನಡೆದಿದೆ, ನಾಲ್ಕನೆಯವರ ಮೇಲೆ ನಡೆದಿಲ್ಲವೆಂದು ವರದಿ ನೀಡಿದರು. ನಾಲ್ಕೂ ಜನರ ಮೇಲೆ ಅತ್ಯಾಚಾರ ನಡೆದಿದೆಯೆಂದು ಸಂನ್ಯಾಸಿನಿಯರು ಹೇಳಿಕೆಗಳನ್ನು ನೀಡಿದರು.

ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆಸಲಾದ ಸಾಮೂಹಿಕ ಅತ್ಯಾಚಾರ ಪೂರ್ವಯೋಜಿತವಾಗಿರುವುದು ಸ್ಪಷ್ಟವಾಗಿದೆ. ಆದರೆ ಈ ಪೂರ್ವಯೋಜನೆಯ ಹಿಂದಿರುವ ಉದ್ದೇಶ ಸ್ಪಷ್ಟವಾಗಿಲ್ಲ. ಸಂನ್ಯಾಸಿನಿಯರ ಮೇಲೆ ನಡೆದ ಸಾಮೂಹಿಕ ಅತ್ಯಾಚಾರ ಅಲ್ಲಿಯ ಸ್ಥಳೀಯ ಘಟನೆಗಳೊಂದಿಗೆ ತಳುಕು ಹಾಕಿಕೊಂಡಿರುವುದನ್ನು ಸಹ ಗಮನಿಸಬೇಕಾಗುತ್ತದೆ.

ಮಧ್ಯಪ್ರದೇಶದ ರಾಜ್ಯ ಸಭೆಯ ಸದಸ್ಯ ಮೇಬಲ್ ರೆಬೆಲ್ಲೊ "ಇದು ಕೇವಲ ಮಹಿಳೆಯರ ಮೇಲೆ ನಡೆದ ಅತ್ಯಾಚಾರದ ಪ್ರಶ್ನೆಯೇ ಹೊರತು ಅಲ್ಪಸಂಖ್ಯಾತರ ಪ್ರಶ್ನೆಯಲ್ಲಾ" ಎಂದು ವಾದಿಸಲು ಪ್ರಯತ್ನಿಸಿದ್ದಾರೆ. ಆದರೆ ಸ್ಥಳೀಯ ಘಟನೆಗಳು ಅಲ್ಪಸಂಖ್ಯಾತರ ಮೇಲೆ ಇರುವ ಅಸಹನೆಯನ್ನು ತೋರಿಸುತ್ತದೆ. ಮಧ್ಯಪ್ರದೇಶದ ಮುಖ್ಯಮಂತ್ರಿ ದಿಗ್ವಿಜಯ ಸಿಂಗ್ ಮತೀಯ ಎಲಿಮೆಂಟ್ಸ್‌ಗಳು ಪಕ್ಕದ ಮಹಾರಾಷ್ಟ್ರ ಹಾಗೂ ಗುಜರಾತಿನಿಂದ ನುಸುಳಿ ಮಧ್ಯಪ್ರದೇಶಕ್ಕೆ ಬರುತ್ತಿವೆಯೆಂದು ಆರೋಪಿಸಿದ್ದಾರೆ. ವಿಶ್ವ ಹಿಂದೂ ಪರಿಷತ್‌ಗೂ ಈ ಘಟನೆಗೂ ಸಂಬಂಧವನ್ನು ಕಲ್ಪಿಸುವ ಪೂರಕ ಘಟನೆಗಳನ್ನು ಉದಹರಿಸಲಾಗುತ್ತಿದೆ. ಸಂನ್ಯಾಸಿನಿಯರ ಮೇಲೆ ನಡೆದ ಸಾಮೂಹಿಕ ಅತ್ಯಾಚಾರದಲ್ಲಿ ವಿಶ್ವ ಹಿಂದೂ ಪರಿಷತ್‌ನವರ ಪಾತ್ರವೇನು ಎಂಬುದು ಸ್ಪಷ್ಟವಾಗಿಲ್ಲವಾದರೂ, ವಿಶ್ವ ಹಿಂದೂ ಪರಿಷತ್‌ನ ನಾಯಕರಾದ ಬಿ.ಐ. ಪ್ರೇಮ್ "ಕ್ರೈಸ್ತ ಮಿಷನರಿಗಳ ಮೇಲೆ ನಡೆಯುತ್ತಿರುವ ದಾಳಿ ಹಿಂದೂಗಳಲ್ಲಿ ಮೂಡಿದ ಜಾಗೃತಿಯ ಫಲ" ಎಂಬ ಹೇಳಿಕೆಯಲ್ಲಿ ಘಟನೆಯನ್ನು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಕಾಣಬಹುದು.

ಸಂನ್ಯಾಸಿನಿಯರ ಮೇಲೆ ನಡೆದ ಸಾಮೂಹಿಕ ಅತ್ಯಾಚಾರದ ಹಿಂದೆ ರಾಜಕೀಯ ಉದ್ದೇಶವಿದೆಯೆಂದು ಪಾದ್ರಿ ಅಭಿಪ್ರಾಯ ಪಡುತ್ತಾರೆ. ಆದಿವಾಸಿ ಜನರು ಅತ್ಯಾಚಾರವೆಸಗಲು ಸಾಧ್ಯವಿಲ್ಲ. ಹೊರಗಿನವರ ಪ್ರೇರಣೆಯಿಂದ ಈ ಕೃತ್ಯವನ್ನು ಎಸಗಲಾಗಿದೆ. ಚರ್ಚ್ ಮಿಷನರಿಗಳು ಆದಿವಾಸಿ ಜನರೊಂದಿಗೆ ಕೆಲಸ ಮಾಡುತ್ತಿವೆ. ಮಧ್ಯಪ್ರದೇಶದ ಫಾದರ್ ಎಡ್‌ವರ್ಡ್ ಅವರು ಮೇಲೆ ನಡೆದ ದಾಳಿಯ ನಿದರ್ಶನವನ್ನು ನೀಡುತ್ತಾ, ಅಲ್ಪಸಂಖ್ಯಾತರ ಬಗೆಗಿನ ಅಸಹನೆಯೇ ಈ ಕೃತ್ಯಕ್ಕೆ

ಕಾರಣವೆಂದು ನುಡಿಯುತ್ತಾರೆ. ಕೆಲವೇ ದಿನಗಳ ಹಿಂದೆ ಮೌಲ್ವಿಯವರ ಹೆಂಡತಿಯ ಸಾವು ಹಲವಾರು ಅನುಮಾನಗಳಿಗೆ ಅಸ್ಪದನೀಡಿತ್ತು. ಇಂದೂರಿನ ಸ್ಥಳೀಯ ಜನರು ಮಾತ್ರ "ಆಕೆಯ ಮೇಲೆ ಅತ್ಯಾಚಾರವೆಸಗಿ ಸಾಯಿಸಲಾಗಿದೆ ಅಥವಾ ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡಲಾಗಿದೆ. ಪೊಲೀಸರು ಘಟನೆಯನ್ನು ಮುಚ್ಚಿಹಾಕುವ ಪ್ರಯತ್ನವನ್ನು ಮಾಡುತ್ತಿದ್ದಾರೆ" ಎಂದು ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದರು.

ಸ್ಥಳೀಯ ಎಂ.ಎಲ್.ಎ ಹಾಗೂ ಮದ್ಯದ ಕಳ್ಳಸಾಗಣೆಯ ಮಾಫಿಯಾ ಗ್ಯಾಂಗ್‌ನ ಕೈವಾಡವಿರಬಹುದೆಂದು ಸಹ ಆರೋಪಿಸಲಾಗಿದೆ. ಆದರೆ ಪೊಲೀಸರು ಇದುವರೆಗೂ ಸಾಮೂಹಿಕ ಅತ್ಯಾಚಾರಕ್ಕೆ ಯಾವುದೇ ಗುಂಪಿನೊಂದಿಗೆ ಸಂಬಂಧವನ್ನು ಕಲ್ಪಿಸಿಲ್ಲ. ಅತ್ಯಾಚಾರವೆಂಬುದು ಕೇವಲ ಪುರುಷನ ಲೈಂಗಿಕ ಕಾಮನೆಯಲ್ಲ. ಅದನ್ನು ಒಂದು ಅಧಿಕಾರದ ಅಸ್ತ್ರವನ್ನಾಗಿ ಬಳಸಲಾಗುತ್ತಿದೆ. ಸ್ತ್ರೀಯರ ಘನತೆಯನ್ನು ನಾಶಪಡಿಸಿ ಅಪಮಾನ ಗೊಳಿಸುವುದರ ಜೊತೆಗೆ ಅವರು ಸೇರಿದ ಜನಾಂಗದ ಗಂಡಸರನ್ನ ಅವಮಾನ ಪಡಿಸಲು ಅತ್ಯಾಚಾರವನ್ನು ಸ್ತ್ರೀಯರ ಮೇಲೆ ಎಸಗಲಾಗುತ್ತದೆ. ಸ್ತ್ರೀಯರ ಮೇಲೆ ಎಸಗಲಾಗುತ್ತಿರುವ ಅಮಾನುಷ ದೌರ್ಜನ್ಯಗಳು ಸಮಾಜದ ಸಂಕೀರ್ಣ ಸಮಸ್ಯೆಗಳೊಂದಿಗೆ ತಳುಕು ಹಾಕಿಕೊಂಡಿವೆ. ಸ್ತ್ರೀಯರಿಗೆ ನ್ಯಾಯ ದೊರಕಿಸಿ ಕೊಡುವಲ್ಲಿ ಈ ಬಾಹ್ಯ ಸಂಗತಿಗಳೇ ತೊಡಕಾಗಿ ಪ್ರಾಥಮಿಕ ಹಂತದಿಂದಲೇ ನ್ಯಾಯದಿಂದ ವಂಚಿತಗೊಳಿಸುತ್ತಿವೆ.

ಇತ್ತೀಚಿಗೆ ಹಲವು ರಾಜ್ಯಗಳಲ್ಲಿ ಸ್ತ್ರೀಯರ ಮೇಲೆ ನಡೆಯುತ್ತಿರುವ ಅತ್ಯಾಚಾರದ ಹಿಂದಿರುವ ರಾಜಕೀಯ ಪ್ರೇರಿತ ಹೊಸ ಸ್ವರೂಪವನ್ನು ಗಮನಿಸಲೇಬೇಕಾಗುತ್ತದೆ. ತಮ್ಮ ರಾಜಕೀಯ ಸಿದ್ಧಾಂತಗಳಿಗಾಗಿ ಚುನಾಯಿತ ಪ್ರತಿನಿಧಿಗಳು ಪೊಲೀಸರೊಂದಿಗೆ ಶಾಮೀಲಾಗಿ ಅನ್ಯಾಯಕ್ಕೊಳಗಾದವರಿಗೆ ನ್ಯಾಯ ದೊರಕದಂತೆ ಮಾಡಿ ರಾಜಾರೋಷವಾಗಿ ಓಡಾಡುತ್ತಿದ್ದಾರೆ. ಕೇರಳದಲ್ಲಿ ಪ್ರಭಾವಿ ವ್ಯಕ್ತಿಗಳು, ರಾಜಕೀಯ ವ್ಯಕ್ತಿಗಳು, ಇಂತಹ ಪ್ರಕರಣದಲ್ಲಿ ತೊಡಗಿದ್ದರೂ ಶಿಕ್ಷೆಯಿಂದ ಸುಲಭವಾಗಿ ತಪ್ಪಿಸಿಕೊಳ್ಳುತ್ತಿದ್ದಾರೆ. ಬಾಪ್ರಿದೇವಿಗಾದ ಅನ್ಯಾಯದ ನೋವನ್ನು ಇನ್ನೂ ಮಹಿಳೆಯರು ಮರೆಯುವ ಮುನ್ನವೇ ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆದ ಸಾಮೂಹಿಕ ಅತ್ಯಾಚಾರ ನಮ್ಮ ದೇಶದ ಜನರ ರೋಗಗ್ರಸ್ತ ಮನಸ್ಸಿನ ಕನ್ನಡಿಯಾಗಿದೆ. ಮಾನವೀಯ ಕಾಳಜಿಯುಳ್ಳ ಪ್ರತಿಯೊಬ್ಬರು ಈ ಸಾಮೂಹಿಕ ಅತ್ಯಾಚಾರವನ್ನು ಖಂಡಿಸಲೇಬೇಕಾಗುತ್ತದೆ.

*ರಾಜೇಶ್ವರಿ ಹೆಚ್.ಎಸ್.*

ವಿವಿಧ ಮೂಲಗಳಿಂದ :

---

# ಬಾಗೂರು-ನವಿಲೆ ಸುರಂಗ ಸಂತ್ರಸ್ಥ ರೈತರ ಹೋರಾಟ

ಗೊರೂರಿನ ಹೇಮಾವತಿ ಜಲಾಶಯದಿಂದ ತುಮಕೂರಿಗೆ ಕುಡಿಯುವ ನೀರು ಒದಗಿಸಲು 1979ರಲ್ಲಿ ಬಾಗೂರು ನವಿಲೆ ಸುರಂಗ ಯೋಜನೆಯನ್ನು ದಿ. ಶ್ರೀಮಾನ್ ಡಿ. ದೇವರಾಜ್ ಅರಸುರವರು ಉದ್ಘಾಟಿಸಿದರು. ಈ ಸುರಂಗವು ಏಷ್ಯಾ ಖಂಡದಲ್ಲಿಯೇ ಎರಡನೆಯದಾಗಿದ್ದು, ರಾಷ್ಟ್ರದಲ್ಲಿಯೇ ಅತೀ ದೊಡ್ಡದು. ಸುಮಾರು 200 ಅಡಿಗಳಿಗಿಂತ ಆಳದಲ್ಲಿ 10 ಕಿ.ಮೀ. ಉದ್ದ 33 ಅಡಿ ಸುತ್ತಳತೆ ಕೊರೆಯಲಾಗಿದೆ. ಇಂತಹ ಆಳವಾದ ಸುರಂಗದಿಂದ ಭೂಮಿಯ ಅಂತರ್ಜಲ ಬಸಿದು ಬರಡಾಗುತ್ತಿದೆ. ಈ ಪ್ರದೇಶದಲ್ಲಿ ಅಂತರ್ಜಲ ರಕ್ಷಿಸಲು ಮತ್ತು ವ್ಯವಸಾಯಕ್ಕಾಗಿ ನೀರನ್ನು ಕೂಡಲೇ ಒದಗಿಸಬೇಕೆಂದು ಶ್ರೀಮಾನ್ ಅರಸುರವರು ನುಡಿದಿದ್ದರು.

ಆದರೆ, ತುಮಕೂರು ಮತ್ತು ಮಂಡ್ಯ ಜಿಲ್ಲೆಗೆ ನೀರು 1994ರಲ್ಲಿ ಈ ಯೋಜನೆ ಮೂಲಕ ಸರಬರಾಜು ಆದರೂ ಕೂಡ ಬಾಗೂರು ನವಿಲೆ ಸುರಂಗ ಪ್ರದೇಶಕ್ಕೆ ಯಾವ ನೀರಾವರಿ ಯೋಜನೆಗಳೂ ಈ ಹತ್ತಾರು ವರ್ಷಗಳಲ್ಲಿ ಜಾರಿಗೆ ಬರಲಿಲ್ಲ. ಕೆರೆ ಕಟ್ಟೆಗಳು ಬತ್ತಿ ಹೋದವು. ಅತಂರ್ಜಲ ಬಸಿದು ಭೂಮಿ ಬರಡಾಯಿತು. ರೈತರ ಪ್ರಮುಖ ಆರ್ಥಿಕ ಬೆಳೆಯಾದ ಲಕ್ಷಾಂತರ ತೆಂಗಿನ ಮರಗಳು ನಾಶವಾದವು. ಈ ಪ್ರದೇಶದ ರೈತರು ಕಳೆದ ಹತ್ತು ವರ್ಷಗಳಿಂದ ಅಧಿಕಾರಕ್ಕೆ ಬಂದವರನ್ನು ಅಂಗಲಾಚಿದರು; ಹಲವು ಪ್ರಗತಿಪರರು ರೈತರ ಪರವಾಗಿ ಚಳವಳಿಗಳನ್ನು ನಡೆಸಿದರೂ ಪ್ರಯೋಜನವಾಗಲಿಲ್ಲ. ನಂತರ 1996ರಲ್ಲಿ 'ಅಖಿಲ ಭಾರತ ಕಿಸಾನ್ ಸಭಾ ರೈತ ಸಂಘ'ವು ಸದರಿ ಪ್ರದೇಶದ ರೈತರನ್ನು ಸಂಘಟಿಸಿ ಚಳವಳಿ ಆರಂಭಿಸಿತು. ಈ ಚಳವಳಿಯ ಪ್ರತಿಫಲವಾಗಿ ಸರ್ಕಾರದ (ಮುಖ್ಯಮಂತ್ರಿಯವರ) ಆದೇಶದ ಮೇರೆಗೆ ಹಾಸನ ಜಿಲ್ಲಾ ತೋಟಗಾರಿಕೆ ಇಲಾಖೆ, ಹೇಮಾವತಿ, ಮುಖ್ಯ ಇಂಜಿನಿಯರ್‌ರವರು, ಜಿಲ್ಲಾಧಿಕಾರಿಯವರ ನೇತೃತ್ವದಲ್ಲಿ ಒಂದು ವರದಿಯನ್ನು ಸರ್ಕಾರಕ್ಕೆ ನೀಡಿದರು. ವರದಿ ಪ್ರಕಾರ ಸುರಂಗದ ಕೊರೆಯುವಿಕೆಯಿಂದ ನೀರಿನ ತೊಂದರೆಯುಂಟಾಗಿ ಸುಮಾರು 2.35 ಲಕ್ಷ ತೆಂಗಿನ ಮರಗಳು ಹತ್ತು ವರ್ಷಗಳ ಅವಧಿಯಿಂದಲೂ ಫಸಲು ನಷ್ಟಕ್ಕೆ ಒಳಗಾಗಿವೆ. ಪರಿಹಾರ 25 ಕೋಟಿ 61 ಲಕ್ಷ ರೂ.ಗಳಷ್ಟು ಹಣ ನೀಡಬೇಕು. ಕೂಡಲೇ ನೀರಾವರಿ ಸೌಲಭ್ಯ ಒದಗಿಸಿದರೆ ಮಾತ್ರ ಮರಗಳು ಉಳಿಯುತ್ತವೆ ಎಂದು ವರದಿ ಶಿಫಾರಸ್ಸು ಮಾಡಿತು.

*17ನೇ ಪುಟಕ್ಕೆ ಮುಂದುವರಿದಿದೆ*

# ಅತ್ಯಾಚಾರಕ್ಕೆ ಮರಣದಂಡನೆ ಉತ್ತರವೆ?

ಇತ್ತೀಚೆಗೆ ಮಧ್ಯಪ್ರದೇಶದಲ್ಲಿ ಕ್ರೈಸ್ತ ಸಂನ್ಯಾಸಿನಿಯರು ದುಷ್ಕರ್ಮಿಗಳ ಅತ್ಯಾಚಾರಕ್ಕೊಳಗಾದರು. ಭಾರತದ ಸಂಸ್ಕೃತಿಯ ಗುತ್ತಿಗೆ ಪಡೆದ ವಿಶ್ವಹಿಂದು ಪರಿಷತ್‌ನವರು ಘಟನೆಗೆ ಪ್ರತಿಕ್ರಿಯಿಸುತ್ತಾ ಭಾರತೀಯರ ಭಾವನೆಗಳಿಗೆ ಎಂತಹ ಪೆಟ್ಟುಬಿದ್ದಿದೆಯೆಂದರೆ ಈ ರೀತಿಯ ಕೃತ್ಯಗಳು ಅತಿಶಯವೇನಲ್ಲ ಎಂದರು. ಗೃಹ ಮಂತ್ರಿಗಳು ಮೌನವಾಗಿದ್ದು, ಕೆಲದಿನಗಳ ನಂತರ, ಪ್ರತಿಕ್ರಿಯಿಸುವುದು ಅನಿವಾರ್ಯವಾದಾಗ ಅತ್ಯಾಚಾರಿಗಳಿಗೆ ಮರಣದಂಡನೆ ನೀಡುವ ಕಾನೂನು ಜಾರಿಯಾಗಬೇಕೆಂದು ಗುಡುಗಿದರು.

ಮರಣದಂಡನೆಯ ಮೂಲಕ ನಿಜಕ್ಕೂ ಅತ್ಯಾಚಾರವನ್ನು ನಿಲ್ಲಿಸಬಹುದೇ? ಅಥವಾ ಸಮಸ್ಯೆಯ ಮೂಲವನ್ನು ಅರಿತು ಬೇರೆ ರೀತಿಯ ಪರ್ಯಾಯವನ್ನು ಹುಡುಕುವುದರಿಂದ ಪರಿಹಾರ ದೊರಕಬಹುದೇ ಎಂಬ ಬಗ್ಗೆ ಬೆಂಗಳೂರಿನ ವಿವಿಧ ಮಹಿಳಾ ಗುಂಪುಗಳನ್ನು ಮಾನಸ ಬಳಗದಿಂದ ಸಂಪರ್ಕಿಸಿ ಅಭಿಪ್ರಾಯ ವನ್ನು ಕೇಳಲಾಯ್ತು. ಸಂಗ್ರಹಿಸಿದ ಅಭಿಪ್ರಾಯಗಳನ್ನು ಮಾನಸ ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ. ಅಲ್ಲದೆ ಆ ಬಗ್ಗೆ ಹೆಚ್ಚಿನ ಚರ್ಚೆ ನಡೆಸಿ ಚರ್ಚೆಯ ಸಾರಾಂಶವನ್ನು ಓದುಗರಿಗಾಗಿ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

*– ಸಂ. ಮಂ.*

ಗಂಡು ಹೆಣ್ಣಿನ ನಡುವೆ ತೀವ್ರಕರವಾದ ಪೈಪೋಟಿ ಹೆಚ್ಚಾಗುತ್ತಿರುವ ಕಾಲವಿದು. ಯಾಕೆಂದರೆ ಅನೇಕ ಸ್ಥಳಗಳಲ್ಲಿ ಮತ್ತು ಹಿಂದೆ Isolate ಮಾಡಿದಂತಹ ಕ್ಷೇತ್ರಗಳಲ್ಲಿ ಹೆಚ್ಚುತ್ತಿರುವ ಹೊಸ ಅರಿವು ಮತ್ತು ಹೊರಗಿನ ಪ್ರಭಾವಗಳಿಗೆ ಮಹಿಳೆಯರು ಒಳಗಾಗುತ್ತಿರುವುದು ಕಾರಣವಾಗಿದೆ. ವಿಶ್ವವ್ಯಾಪಿ ಮಾಹಿತಿ ಮತ್ತು ತಂತ್ರಜ್ಞಾನವು ಪೈಪೋಟಿಗೆ ಹೊಸ ನೆಲೆಗಳನ್ನು ಹುಟ್ಟುಹಾಕಿದೆ. ಇಂತಹ ಪರಿಸ್ಥಿತಿಗೆ ಎಡೆಮಾಡಿಕೊಡುವ ಪೈಪೋಟಿಯು ಎಷ್ಟು ಸಂಕೀರ್ಣವಾದುದೆಂದರೆ ಅದು ಮಹಿಳೆಯರ ವಿರುದ್ಧ ದಾರುಣ ಹಿಂಸೆಯಲ್ಲಿ ಕೊನೆಗೊಳ್ಳುತ್ತದೆ ಆ ರೀತಿಯ ಪೈಪೋಟಿಯು ಅತ್ಯಾಚಾರದ ಮೂಲಕ ಪ್ರಕಟವಾಗುತ್ತದೆ. ಹಿಂಸೆಯು ಹುಟ್ಟುಹಾಕಿದ ಹಲವಾರು ವರ್ಷಗಳ ಘರ್ಷಣೆಯಿಂದಾಗಿ ಮಹಿಳೆಯರ ಮೇಲಿನ ಅತ್ಯಾಚಾರವು ಹೆಚ್ಚುತ್ತಿದೆ ಎಂಬುದನ್ನು ಸಮಾಜಶಾಸ್ತ್ರಜ್ಞರು, ಯೋಜನಾಕರ್ತರು ಒಪ್ಪಿಕೊಳ್ಳುತ್ತಾರೆ.

ಹಿಂಸೆಗೊಂದು ಪಾತ್ರವಿರುವುದರಿಂದಲೇ ಯಾವುದೇ ಸಮಾಜದಲ್ಲಾಗಲಿ ಹಿಂಸೆಯು ನಿರಂತರವಾಗುತ್ತಿರುವುದು. ಹಿಂಸೆಗೆ ಬಲಿಯಾಗುತ್ತಿರುವವರ ಸಂಖ್ಯೆ ಹೆಚ್ಚುತ್ತಿರುವುದನ್ನು ಗಮನಿಸಿ ಎಚ್ಚರಗೊಂಡ ಮಹಿಳೆಯರು ಅದನ್ನು ಕಡಿಮೆ ಗೊಳಿಸಲು ಕಾರ್ಯ ಪ್ರವೃತ್ತರಾಗುತ್ತಿದ್ದಾರೆ. ಆದರೆ ಎಲ್ಲೆಡೆ ಹರಡಿಕೊಳ್ಳುತ್ತಿರುವ ಜಾಗತಿಕ ಮಾರುಕಟ್ಟೆಯ ಕಬಂಧಬಾಹು ವಿನೆದುರು ನಮ್ಮ ಪ್ರಯತ್ನ ಎಷ್ಟು ವ್ಯಾಪಕವಾಗಬಹುದು? ಅಂತಹ ಪರಿಸ್ಥಿತಿ ಕುರಿತು ಏನು ಹೇಳಲು ಸಾಧ್ಯ?

ಮೊದಲಿಗೆ ಹಿಂಸೆಯನ್ನು ವಿರೋಧಿಸುವ ಮಹಿಳೆಯರು, ಪುರುಷರು ಅದರ ಮೂಲವನ್ನು ಗುರುತಿಸಬೇಕು. ಮಹಿಳೆಯರ ಮೇಲಿನ ಹಿಂಸೆಯ ವಿವಿಧ ರೂಪಗಳ ಮೂಲಕಾರಣಗಳನ್ನು ಸ್ಪಷ್ಟವಾಗಿ ವಿಶ್ಲೇಷಿಸುವುದು ಅತ್ಯವ್ಯಶಕ. ಮರಣದಂಡನೆ ಮೂಲಕ ಅತ್ಯಾಚಾರದ ಘಟನೆಗೆ ಪ್ರತಿಕ್ರಿಯಿಸಬಹುದೆ ಹೊರತು ಅದರ ಮೂಲ ಕಾರಣಕ್ಕೆ ಉತ್ತರ ನೀಡಲಾಗುವುದಿಲ್ಲ. ಅತ್ಯಾಚಾರದಂತಹ ಸಮಸ್ಯೆಗೆ ಮರಣದಂಡನೆ ಪರಿಹಾರವಲ್ಲ. ಕಠಿಣ ಕಾನೂನು, ಉಗ್ರಶಿಕ್ಷೆಗಳಿಂದ ಅಪರಾಧಗಳು ಕಡಿಮೆ ಯಾಗಿಲ್ಲ.

ಸಮಾಜಕ್ಕೆ ಹಿಂಸೆಯನ್ನು ತಾಳಿಕೊಳ್ಳುವುದು ಅಭ್ಯಾಸವಾದಲ್ಲಿ ಮಹಿಳೆಯರು ಅತ್ಯಾಚಾರಕ್ಕೊಳಗಾಗುವ ಅಥವಾ ಇನ್ನಿತರ ಹಿಂಸೆಗಳಿಗೆ ಒಳಗಾಗುವ ನಿರಂತರ ಅಪಾಯದಲ್ಲೇ ಬದುಕಬೇಕಾಗುತ್ತದೆ. ಆದ್ದರಿಂದ ಮರಣದಂಡನೆ ಬದಲಿಗೆ ನಾವು ಎಲ್ಲಿ ಮತ್ತು ಹೇಗೆ Intervene ಆಗಬೇಕು ಎಂಬುದರ ಕುರಿತು ವಸ್ತುನಿಷ್ಠವಾಗಿ ವಿಶ್ಲೇಷಣೆ ಮಾಡಬೇಕು.

ಮೀರಾ ಚಕ್ರವರ್ತಿ, 'ಮಾನಿನಿ'

# ಅತ್ಯಾಚಾರ ಅಪರಾಧಿಗೆ ಶಿಕ್ಷೆ ಮರಣ ದಂಡನೆಯೇ?

ಮಧ್ಯಪ್ರದೇಶದಲ್ಲಿ ಕ್ರೈಸ್ತ ಸಂನ್ಯಾಸಿಗಳ ಮೇಲೆ ಇತ್ತೀಚಿಗೆ ನಡೆದ ಅತ್ಯಾಚಾರ ಖಂಡನೀಯವಷ್ಟೇ ಅಲ್ಲ, ಅದನ್ನು ರಾಜಕೀಯ ಕಾರಣಗಳಿಗೆ ಸಮರ್ಥಿಸಿಕೊಂಡವರ ಮಾನಸಿಕ ವಿಕೃತತೆ ಇಡೀ ಮನುಕುಲಕ್ಕೆ ಅವಮಾನ ಮಾಡುವಂತಹುದು. ಈ ಹಿನ್ನೆಲೆಯಲ್ಲಿ ಅತ್ಯಾಚಾರ ಅಪರಾಧಕ್ಕೆ ಸಂಬಂಧಪಟ್ಟ ಕಾನೂನಿನ ಬಗ್ಗೆ ಚರ್ಚೆಗಳು ನಡೆದಿವೆ. ಈ ಪ್ರಕರಣದ ಸಂದರ್ಭದಲ್ಲಿ ಗೃಹಮಂತ್ರಿ ಎಲ್. ಕೆ. ಅದ್ವಾನಿಯವರು ಅತ್ಯಾಚಾರಕ್ಕೆ ಸಂಬಂಧಪಟ್ಟ ಕಾನೂನಿನ ತಿದ್ದುಪಡಿಯ ಬಗ್ಗೆ ಮಾತನಾಡಿದ್ದಾರೆ. ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ ಕೇಂದ್ರ ಸರ್ಕಾರವು ಅತ್ಯಾಚಾರಿಗೆ ಮರಣದಂಡನೆಯ ಶಿಕ್ಷೆ ವಿಧಿಸಬಹುದೆಂದು ಸೂಚಿಸಿದ್ದಾರೆ. ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆದ ಅತ್ಯಾಚಾರ ಪ್ರಕರಣವನ್ನು ಉಲ್ಲೇಖಿಸುತ್ತಾ ಈಗಿರುವ ಕಾನೂನು ಅಪರಾಧಿಗಳನ್ನು ಪತ್ತೆ ಹಚ್ಚಲು ಅಸಮರ್ಪಕ ವಾಗಿದೆಯೆಂದೂ ಅದರಿಂದಾಗಿ ತಕ್ಕ ಶಿಕ್ಷೆ ಕೊಡಲು ಸಾಧ್ಯ ವಾಗುತ್ತಿಲ್ಲವೆಂದೂ ಸೂಚಿಸಿದ್ದಾರೆ. ಈ ಸಂದರ್ಭದಲ್ಲಿ ನುಡಿದ ಮಾತುಗಳು ನಮ್ಮ ಮುಂದೆ ಹಲವಾರು ಪ್ರಶ್ನೆಗಳನ್ನು ಇಡುತ್ತವೆ.

(1) 1983ರಲ್ಲಿ ತಿದ್ದುಪಡಿಯಾದ ಅತ್ಯಾಚಾರಕ್ಕೆ ಸಂಬಂಧಪಟ್ಟ ಕಾನೂನಿನ ನಂತರವು ನಡೆದ ಹಲವಾರು ಅತ್ಯಾಚಾರ ಪ್ರಕರಣಗಳಲ್ಲಿ ನೊಂದ ಮಹಿಳೆಗೆ ಸಿಕ್ಕಿರುವ ನ್ಯಾಯ ಅಷ್ಟರಲ್ಲೇ ಇದೆ. ರಾಜಸ್ಥಾನದ ಭಾಂವ್ರಿದೇವಿಯ ಮೇಲೆ ಸಾಮೂಹಿಕ ಅತ್ಯಾಚಾರ ನಡೆದಾಗ ಅವಳಿಗೆ ನ್ಯಾಯ ದೊರಕದೇ ಹೋದದ್ದು ಕಾನೂನಿನ ಅಸಮರ್ಪಕತೆಯಿಂದಲ್ಲ, ಕಾನೂನಿನ ಗೂಟ ಹಿಡಿದವರ ನಿರಂಕುಶ ವರ್ತನೆಯಿಂದ. ಹಾಗೆಂದ ಮಾತ್ರಕ್ಕೆ ಈಗಿರುವ ಅತ್ಯಾಚಾರ ವಿರೋಧಿ ಕಾನೂನು ಸಮರ್ಪಕವೆಂದು ಅರ್ಥವಲ್ಲ. ಈ ಹಿಂದಿನ ಯಾವ ಸಂದರ್ಭದಲ್ಲೂ ಕಾನೂನಿನ ತಿದ್ದುಪಡಿಯ ಬಗ್ಗೆ ಚಕಾರವೆತ್ತದ ಅದ್ವಾನಿಯವರು ಈಗ 'ಔದಾರ್ಯ' ತೋರಿಸುವುದರ ಹಿಂದಿನ ರಾಜಕೀಯ ಏನು?

(2) ಮಧ್ಯ ಪ್ರದೇಶದ ಕ್ರೈಸ್ತ ಸಂನ್ಯಾಸಿನಿಯರ ಮೇಲಿನ ಅತ್ಯಾಚಾರದ ಕೃತ್ಯವನ್ನು ಬೆಂಬಲಿಸಿರುವ, ಸಮರ್ಥಿಸಿ ಕೊಂಡಿರುವ ಸಂಘ ಪರಿವಾರ ಮತ್ತು ವಿ.ಎಚ್.ಪಿ. ಸಂಘಟನೆಗಳು ಆಳುವ ಕೇಂದ್ರ ಸರ್ಕಾರಕ್ಕೆ ಮಸಿ ಬಳಿದಿದೆಯಷ್ಟೇ ಅಲ್ಲ, ಅವರು ಘೋಷಿಸಿಕೊಳ್ಳುವ ದಿವ್ಯ 'ಸಂಸ್ಕೃತಿ'ಗೆ ಅವಮಾನ ಮಾಡಿವೆ. ತಮ್ಮ ಅಂಗ ಸಂಸ್ಥೆಗಳ ಈ ಕೃತ್ಯವನ್ನು ಸಂಭಾಳಿಸುವ ತಂತ್ರವಾಗಿ ಅದ್ವಾನಿಯವರು ಅತ್ಯಾಚಾರ ವಿರೋಧಿ ಕಾನೂನಿನ ತಿದ್ದುಪಡಿಗೆ ಕೈ ಹಾಕಿದ್ದಾರೆ.

(3) ಅತ್ಯಾಚಾರ ಮಾಡಿದ ಅಪರಾಧಿಗಳನ್ನು ಶಿಕ್ಷಿಸುವ, ಅತ್ಯಾಚಾರಕ್ಕೊಳಗಾದವರಿಗೆ ನ್ಯಾಯ ದೊರಕಿಸುವ ಪ್ರಕ್ರಿಯೆಗೆ ಇನ್ನೂ ಹೆಚ್ಚಿನ ಮಾನವೀಯ ಆಯಾಮಗಳು ಬೇಕಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಈ ವಿವಿಧ ಆಯಾಮಗಳ ಬಗ್ಗೆ ಚಿಂತಿಸದೆ ಅತ್ಯಾಚಾರಿಗೆ ಮರಣದಂಡನೆಯ ಶಿಕ್ಷೆಯನ್ನು ಘೋಷಿಸುವುದು ಸಮಸ್ಯೆಗೆ ಪರಿಹಾರವಲ್ಲ.

'ಮರಣ ದಂಡನೆ' ಶಿಕ್ಷೆಯ ವಿರುದ್ಧವಾಗಿ ಇಡೀ ವಿಶ್ವದಲ್ಲೇ ಕೂಗೆದ್ದಿರುವಾಗ ಅದನ್ನು ಮೃಗೀಯ ನ್ಯಾಯವಾಗಿ ಮಾಡಬೇಕೆನ್ನುವ ಕೇಂದ್ರ ಸರ್ಕಾರದ ನೀತಿ ನಾಟಕವಲ್ಲದೆ ನಿಜವಾದ ಮಾನವೀಯ ಕಾಳಜಿಯಲ್ಲ.

*ಎನ್. ಗಾಯತ್ರಿ*

## ಓದುಗರಿಗೊಂದು ಮನವಿ

ಕಳೆದ ಹನ್ನೆರಡು ವರ್ಷಗಳಿಂದ 'ಮಾನಸ' ತಿಂಗಳ ಪತ್ರಿಕೆಯನ್ನು ಓದುಗರ ಹಾಗೂ ಸಹೃದಯರ ಸಹಕಾರದಿಂದ ಪ್ರಕಟಿಸುತ್ತಿದ್ದೇವೆ. ಯಾವುದೇ ವಿದೇಶಿ ಸಂಸ್ಥೆಯ ಹಾಗೂ ಸರ್ಕಾರದ ನೆರವಿಲ್ಲದೆ ಸ್ವಾಯತ್ತವಾಗಿ ಮಹಿಳೆಯರೇ ಮಾನಸ ಪತ್ರಿಕೆಯನ್ನು ಪ್ರಕಟಿಸುತ್ತಿದ್ದೇವೆ. ಕರ್ನಾಟಕದ ಮಹಿಳಾ ಚಳುವಳಿಯಲ್ಲಿ ಮಾನಸದಂತಹ ಪತ್ರಿಕೆಯ ಪಾತ್ರ ಮಹತ್ತರವಾದುದೆಂದು ನಾವು ನಂಬಿದ್ದೇವೆ. ನಮ್ಮ ಈ ನಂಬಿಕೆಯನ್ನು ಇದುವರೆಗೆ ನೀರೆರೆದು ಪೋಷಿಸಿದವರು ನೀವು.

ಚಂದಾವನ್ನು ಸಕಾಲದಲ್ಲಿ ನವೀಕರಿಸುವುದರೊಂದಿಗೆ ಮಾನಸ ಪತ್ರಿಕೆಗೆ ಹಾಗೂ ಮಾನಸದ ಚಟುವಟಿಕೆಗಳಿಗೆ ವರ್ಷಕ್ಕೆ 100/- ರೂ. ಕೊಡುಗೆಯಾಗಿ ನೀಡಬೇಕೆಂದು ಓದುಗರನ್ನು ಕೋರುತ್ತೇವೆ. ನೀವು ನೀಡುವ ಈ ನೆರವು ಮಾನಸವನ್ನು ಬೆಳೆಸುವಲ್ಲಿ ನೆರವಾಗುತ್ತದೆ.

*ಸಂ. ಮಂ.*

# ಅತ್ಯಾಚಾರ - ಕಾನೂನು; ಬಲಿಪಶುವಾದ ಮಹಿಳೆ

ಅತ್ಯಾಚಾರ, ಬಲಾತ್ಕಾರ, ಮಾನಭಂಗದ ಪ್ರಕರಣಗಳು ದಿನನಿತ್ಯದ ರಾಜಕೀಯ ವಿದ್ಯಮಾನಗಳಷ್ಟೇ ಸಹಜವಾದ ವರದಿಗಳಾಗಿ ವೃತ್ತ ಪತ್ರಿಕೆಗಳಲ್ಲಿ ಕಾಣಸಿಗುತ್ತವೆ. ಕಣ್ಣಿಗೆ ಕಾಣುವ ವರದಿಗಳು ಇವಾದರೆ..... ಎಲ್ಲಿಯೂ ಸುಳಿವೇ ಸಿಗದ ಪ್ರಕರಣಗಳು ಇನ್ನೆಷ್ಟೋ. ಪಾಳೆಯಗಾರೀ - ಅರೆ ಪಾಳೆಯಗಾರೀ ಮೌಲ್ಯಗಳೇ ವಿಜೃಂಭಿಸುತ್ತಿರುವ ಈ ಸಮಾಜದಲ್ಲಿ ಮಹಿಳೆಯ ಮೇಲೆ ಈ ಶಕ್ತಿಗಳು ಪ್ರಯೋಗಿಸುವ ಬಲವಾದ ಅಸ್ತ್ರ "ಅತ್ಯಾಚಾರ". ಪುರುಷನ ವಜ್ರಶಕ್ತಿಯೆದುರು ಮಹಿಳೆ ಬಲಹೀನಳು ಎಂಬುದನ್ನು ಸಾಬೀತುಪಡಿಸಲೆಂದೇ ಹಲವು ಬಾರಿ ಇಂತಹ ಘಟನೆಗಳು ಜರುಗುತ್ತವೇನೋ ಎಂದು ಅನುಮಾನ ಹುಟ್ಟಿಸುವಷ್ಟು ಅತ್ಯಾಚಾರದ ಘಟನೆಗಳು ಇತ್ತೀಚಿನ ದಿನಗಳಲ್ಲಿ ನಡೆಯುತ್ತಿವೆ. ವರದಿಯಾಗುವ ಪ್ರಕರಣಗಳ ವಿವರಗಳನ್ನು ನೋಡಿದರೆ ಅತ್ಯಾಚಾರ ನಡೆಸಲು ಅಥವಾ ಮಹಿಳೆಯರ ಮೇಲೆ ದೌರ್ಜನ್ಯ ನಡೆಸಲು ಇಂತಹುದೇ ಕಾರಣಗಳು ಬೇಕೆಂದಿಲ್ಲ. ವೈಯಕ್ತಿಕ ದ್ವೇಷದಿಂದ ಪ್ರಾರಂಭಿಸಿ, ಕುಟುಂಬ ಕಲಹಗಳು, ಮನೆತನದ ದ್ವೇಷಗಳು, ಭೂ ಒಡೆತನದ ವಿವಾದಗಳು, ಕ್ಷುಲ್ಲಕ ರಾಜಕೀಯ ವಿವಾದಗಳು, ಧರ್ಮ, ಜಾತಿ, ಭಾಷೆಯ ವೈಮನಸ್ಸುಗಳು ಹೀಗೇ.... ಏನಾದರೊಂದು ಕಾರಣ ಇದ್ದರೂ ಸಾಕು. ಇದು ಒಂದೆಡೆಯಾದರೆ ಮುಕ್ತ ನೀತಿಗಳ ಪರಿಣಾಮವಾಗಿ ಸಾರಾಸಗಟಾಗಿ ಆಮದಾಗುತ್ತಿರುವ 'ವಿದೇಶೀ ಸಂಸ್ಕೃತಿ'ಯು ಹರಡುತ್ತಿರುವ ಕೀಳು ಅಭಿರುಚಿ, ಅದನ್ನೇ ವೈಭವೀಕರಿಸಿ ಪೈಪೋಟಿಯಲ್ಲಿ ಪ್ರಸಾರ ಮಾಡುವ ನಮ್ಮ ಸಮೂಹ ಮಾಧ್ಯಮಗಳು, ಅದರಿಂದಾಗಿ ಕಲುಷಿತಗೊಳ್ಳುತ್ತಿರುವ ಸಾಂಸ್ಕೃತಿಕ ಪರಿಸರ ಕೂಡ ಇಂತಹ ಕ್ರಿಯೆಗಳನ್ನು ಪ್ರಚೋದಿಸುತ್ತಿವೆ.

ಆದರೆ ಇವೆಲ್ಲವುಗಳು ಒಂದು ಗೂಡಿದ ಪರಿಣಾಮಕ್ಕೆ ಬಲಿಪಶು ಮಹಿಳೆ ಎಂಬುದನ್ನು ನಮ್ಮ ಜಾಗೃತ ಮನಸ್ಸು ಸದಾ ಗುರುತಿಸಬೇಕು.

ಈ ಹಿಂದೆ ನಡೆದ, ವರದಿಯಾದ ಹಲವು ಇಂತಹ ಪ್ರಕರಣಗಳ ಅಧ್ಯಯನ ಮಾಡಿದಾಗ ನಮಗೆ ಕಂಡು ಬರುವ ಅಂಶ - ಹೆಚ್ಚಿನ ಸಂದರ್ಭಗಳಲ್ಲಿ ಅಪರಾಧಿಗಳು ಶಿಕ್ಷೆಗೆ ಒಳಪಡುವುದಿಲ್ಲ. ಅವುಗಳಿಗೆ ಕಾರಣಗಳು ಹಲವು.

1. 'ಅತ್ಯಾಚಾರ' ನಡೆದಿದೆ ಎಂಬುದನ್ನು ಸಾಬೀತು ಪಡಿಸಲು ಸಾಕ್ಷ್ಯಾಧಾರಗಳು ಲಭ್ಯವಾಗದಿರುವುದು.

2. ಹಲವು ಸಾಮಾಜಿಕ, ಕೌಟುಂಬಿಕ, ಪ್ರತಿಷ್ಠಿತರ ಒತ್ತಡದಿಂದಾಗಿ ಅತ್ಯಾಚಾರಕ್ಕೆ ಒಳಗಾದ ಮಹಿಳೆ/ಕುಟುಂಬದವರು ಹಿಂದೆ ಸರಿಯುವುದು.

3. ರಾಜಕೀಯ ವ್ಯಕ್ತಿಗಳ/ಪಕ್ಷಗಳ ಒತ್ತಡದಿಂದ ಪೊಲೀಸ್/ವೈದ್ಯಾಧಿಕಾರಿಗಳು ಸಾಕ್ಷಿಗಳನ್ನು ನಾಶಪಡಿಸುವುದು.

4. ಕುರುಡು ಕಣ್ಣಿನಿಂದ (ಅ) ನ್ಯಾಯ ನೀಡುವ ನ್ಯಾಯಾಲಯಗಳು.

ಇವೆಲ್ಲವುಗಳೂ ಒಂದೊಂದೇ ಅಥವಾ ಒಟ್ಟಿಗೇ ಪ್ರಭಾವ ಬೀರುವ ಹಲವು ಪ್ರಕರಣಗಳು ನಮ್ಮ ಮುಂದೆಯೇ ನಡೆದಿವೆ. ಉದಾ : ರಾಜಾಸ್ಥಾನದ ಭಾಂವ್ರೀದೇವಿಯ ಮೇಲೆ ನಡೆದ ಸಾಮೂಹಿಕ ಅತ್ಯಾಚಾರದ ಪ್ರಕರಣದಲ್ಲಿ ಆ ರಾಜ್ಯದ ಆಡಳಿತದ ಚುಕ್ಕಾಣಿಯನ್ನು ಹಿಡಿದ ಪಕ್ಷ ಮತ್ತದರ ಮಹಿಳಾ ವಿಭಾಗ ನಡೆದುಕೊಂಡ ರೀತಿಯೇ ಜ್ವಲಂತ ಸಾಕ್ಷಿ. ಧರ್ಮದ ಹೆಸರಿನಲ್ಲಿ ದೇಶವನ್ನಾಳಬಯಸುವ, ಧರ್ಮದ ಹೆಸರಿನಲ್ಲಿ ಮಹಿಳೆಯರನ್ನು ಕುಟುಂಬದ ವಲಯಕ್ಕೆ ಸೀಮಿತ ಗೊಳಿಸಲು ಪ್ರಯತ್ನಿಸುವ ಪಟ್ಟ ಭದ್ರ ಹಿತಾಸಕ್ತಿಗಳು "ಸಾಮೂಹಿಕ ಅತ್ಯಾಚಾರ" ದಂತಹ ಸಂದರ್ಭದಲ್ಲಿ ತೆಗೆದುಕೊಂಡ ನಿಲುವು ಸಾಮೂಹಿಕವಾಗಿ, ರಾಜಕೀಯವಾಗಿ, ಸಂಘಟನಾತ್ಮಕವಾಗಿ, ಕೊನೆಗೆ ನ್ಯಾಯಾಲಯದಲ್ಲಿ ಕೂಡ ತಮ್ಮ ಪ್ರಭಾವವನ್ನು ಹೇಗೆ ಬೀರಬಹುದೆಂಬುದನ್ನು ಸಾಬೀತು ಪಡಿಸಿವೆ.

ಅಂತೆಯೇ "ಹಾಸನದ ಅತ್ಯಾಚಾರದ ಪ್ರಕರಣ"ಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಹೈಕೋರ್ಟ್ ನೀಡಿದ ತೀರ್ಪಿನ ಮೇಲ್ಮನವಿಗೆ ದೇಶದ ಸರ್ವೋಚ್ಚ ನ್ಯಾಯಾಲಯ ಕೊಟ್ಟ ತೀರ್ಪು ಕೂಡ ಮತ್ತೊಂದು ರೀತಿಯ ಉದಾಹರಣೆಯಾಗಿ ನಮ್ಮ ಕಣ್ಮುಂದೆ ನಿಲ್ಲುತ್ತದೆ. ಇತ್ತೀಚೆಗೆ ಮಧ್ಯ ಪ್ರದೇಶದಲ್ಲಿ ನಡೆದ "ಕ್ರಿಶ್ಚಿಯನ್ ನನ್‌ಗಳ ಮೇಲಿನ ಅತ್ಯಾಚಾರ" ಮತ್ತು ದೇಶದ ಧರ್ಮ ರಕ್ಷಕರು ಅದನ್ನು ಬೆಂಬಲಿಸಿ ನೀಡಿದ ಹೇಳಿಕೆಗಳು ಮತ್ತೊಮ್ಮೆ ಈ ಸಮಾಜ ತನ್ನೆಲ್ಲಿ ದ್ವೇಷಗಳನ್ನು ತೀರಿಸಿಕೊಳ್ಳಲು ಮಹಿಳೆಯನ್ನು ಹೇಗೆ ಬಳಸಿಕೊಳ್ಳುತ್ತಿದೆಯೆಂಬುದನ್ನು ಸಾಬೀತು ಪಡಿಸಿದೆ.

ಈ ಎಲ್ಲ ಪ್ರಕರಣಗಳನ್ನು ಸೂಕ್ಷ್ಮವಾಗಿ ಗಮನಿಸುವಾಗ, ಹೊಸ ಹೊಸ ಶಿಕ್ಷೆಗಳ ಕುರಿತು ಮಾತನಾಡುವ ಬದಲು ಅಪರಾಧಿಗಳು ಶಿಕ್ಷೆಗೆ ಒಳಪಡುವಂತಹ ಕಠಿಣ ಕ್ರಮಗಳ ಅಗತ್ಯ ಹೆಚ್ಚು ಪ್ರಸ್ತುತ ಎನಿಸುತ್ತಿದೆ. 'ಮರಣದಂಡನೆ'ಯಂತಹ ಶಿಕ್ಷೆ ಎಂಬ ಮಾತುಗಳೂ ಕೇಳಿಬರುತ್ತಿವೆ. ಆದರೆ ಇದೆಂತಹ ವಿಪರ್ಯಾಸ! 'ತೊಟ್ಟಿಲು ತೂಗುವವರೂ ನಾವೇ, ಮಗುವನ್ನೂ ಚಿವುಟುವವರೂ ನಾವೇ'. ಇದೆಷ್ಟು ಸರಿ? ಅಪರಾಧಿಗಳಿಗೆ ಕನಿಷ್ಠ ಸಾಮಾನ್ಯ ಶಿಕ್ಷೆಯೂ ಆಗಲಾರದಂತಹ 'ಶ್ರೀರಕ್ಷೆ' ಕೊಡುವವರೂ ನಾವೇ. ಶಿಕ್ಷೆಯ ಕುರಿತು ಬೇರೆ ಬೇರೆ ವಿಧಾನಗಳನ್ನು ಸೂಚಿಸುವವರೂ ನಾವೇ! ಇದೆಷ್ಟು ಸಮಂಜಸ? ಈಗಾಗಲೇ ಇರುವ ಕಾನೂನಿನನ್ವಯ ಅಪರಾಧಿಗಳಿಗೆ ಶಿಕ್ಷೆಯಾಗುವಂತಹ ಕಠಿಣ ಕ್ರಮ ಎಷ್ಟೋ ಪ್ರಕರಣಗಳನ್ನು ಕಡಿಮೆ ಮಾಡಬಹುದಾಗಿತ್ತು. ಮತ್ತು "ಒತ್ತಡ ಸಂಸ್ಕೃತಿ"ಯ ಪ್ರಬಂಧಕರನ್ನು ಶಿಕ್ಷೆಗೆ ಒಳಪಡಿಸುವ ಕ್ರಮಗಳೂ ಅಗತ್ಯ ಎನಿಸುತ್ತದೆ. ಬೇರೆ ಬೇರೆ ಅಪರಾಧಗಳಲ್ಲಿ 1950ರಿಂದೀಚೆಗೆ ಮಹಾರಾಷ್ಟ್ರದಲ್ಲಿ ಮರಣದಂಡನೆ ಶಿಕ್ಷೆಗೆ ಒಳಗಾದ 304 ಪ್ರಕರಣಗಳಲ್ಲಿ ಕೇವಲ 65 ಜನರಿಗೆ ಶಿಕ್ಷೆಯಾದ ವರದಿ ಇದೆ. ಶಿಕ್ಷೆಯವರೆಗೆ ಅಪರಾಧಿಗಳು ಹೋಗದಂತಹ ವಾತಾವರಣ ನಿರ್ಮಾಣಕ್ಕೆ ತಡೆ ಮತ್ತು ಇಂತಹ ಹೀನ ಕೃತ್ಯವನ್ನು ಪ್ರಚೋದಿಸುವ ವಾತಾವರಣವನ್ನು ನಿರ್ಮೂಲಗೊಳಿಸುವತ್ತ ನಡೆಸುವ ಸಾಮೂಹಿಕ ಪ್ರಯತ್ನ ಹೆಚ್ಚು ಫಲಕಾರಿಯಾದೀತು.

***ವಿಮಲ ಕೆ. ಎಸ್.***

## ಮರಣದಂಡನೆಯಿಂದ ಆರೋಪಿ, ಆರೋಪವೆರಡು ಮರೆತು ಹೋಗುತ್ತದೆ

**ಗೀತಾ ಮೆನನ್, ಸ್ತ್ರೀ ಜಾಗೃತಿ ಸಮಿತಿ**

ಅತ್ಯಾಚಾರ-ಮಹಿಳೆಯರ ಮೇಲಾಗುವ ಅತ್ಯಂತ ನೀಚ ಹಿಂಸೆಯೆಂಬುದರ ಬಗ್ಗೆ ಸಂಶಯವಿಲ್ಲ. ಅತ್ಯಾಚಾರ ದೇಹದ ಮೇಲೆ ನಡೆಯುವ ದೌರ್ಜನ್ಯವಷ್ಟೇ ಅಲ್ಲದೆ ಮಾನಸಿಕವಾಗಿ, ಭಾವನಾತ್ಮಕವಾಗಿ ಮಹಿಳೆಯರನ್ನು ಕೆಂಗೆಡಿಸುತ್ತದೆ. ಅವಳ ಜೀವಂತಿಕೆಯನ್ನೆ ಲೂಟಿ ಮಾಡಿಬಿಡುವುದಲ್ಲದೆ ಆತ್ಮಗೌರವವನ್ನು ನಾಶ ಮಾಡಿಬಿಡುತ್ತದೆ. ಅತ್ಯಾಚಾರ ಒಂದು ಪ್ರಬಲ ಅಸ್ತ್ರ. ಜಾತಿ ಯುದ್ಧಗಳಲ್ಲಿ ಅದನ್ನು ರಾಜಕೀಯವಾಗಿ ಬಳಸಿಕೊಂಡರೆ, Custodial (ಠಾಣೆಗಳಲ್ಲಿ ನಡೆದ ಅತ್ಯಾಚಾರ) ಅತ್ಯಾಚಾರ ಮತ್ತು ಸಾಮೂಹಿಕ ಅತ್ಯಾಚಾರಗಳ ಸಂದರ್ಭದಲ್ಲಿ ಅದು ಪುರುಷ ಪ್ರಧಾನತೆಯ ಹಕ್ಕಾಗಿಬಿಡುತ್ತದೆ. ಹಾಗೂ ಚಳುವಳಿಗಳನ್ನು ಮುರಿಯುವ ಸಾಧನವಾಗಿಯು ಬಳಕೆಯಾಗುತ್ತದೆ.

ಬೆಳಕಿಗೆ ಬರುವ ಅತ್ಯಾಚಾರದ ಪ್ರಕರಣಗಳು ಅತಿ ಕಡಿಮೆ. ಅನೇಕ ಅತ್ಯಾಚಾರದ ಪ್ರಕರಣಗಳು ವರದಿಯಾಗುವುದೇ ಇಲ್ಲ. ದಾಖಲಾಗಿ, ಮೊಕದ್ದಮೆಯನ್ನು ಫಾಲೋ ಅಪ್ ಮಾಡಿದವರು ಬಹಿಷ್ಕಾರಕ್ಕೋ, ಬೆದರಿಕೆಗೋ ಒಳಗಾಗುವುದು ಖಂಡಿತ. ಜೊತೆಗೆ ನಿರಂತರ ನಿಂದನೆಗೊಳಗಾಗಬೇಕಾಗುತ್ತದೆ. ಅಂದರೆ ಈ ಕ್ರೂರ ಸಮಾಜ, ನ್ಯಾಯಾಂಗ ಮತ್ತು ಅಪರಾಧಿ ವ್ಯವಸ್ಥೆಯಿಂದ ಮತ್ತೊಮ್ಮೆ ಮಾನಸಿಕ ಅತ್ಯಾಚಾರಕ್ಕೊಳಗಾದಂತೆ. ಫಲಿತಾಂಶವೆಂದರೆ ಆರೋಪಿ ಸುಲಭವಾಗಿ ತಪ್ಪಿಸಿಕೊಳ್ಳುವುದು ಅಥವಾ ಅತಿ ಕಡಿಮೆ ಶಿಕ್ಷೆಗೆ ಒಳಗಾಗುವುದು.

ಅತ್ಯಾಚಾರಿಗೆ ಮರಣದಂಡನೆ ನೀಡುವ ಸಮುದಾಯಗಳಲ್ಲಿ ಅದರ ಪರ ವಿರೋಧದ ವಾದಕ್ಕೆ ಅವಕಾಶವೇ ಇಲ್ಲ.

ಅನೇಕ ಅತ್ಯಾಚಾರಗಳು ನಡೆದಿರುವುದು ಪ್ರಬಲ ಶಕ್ತಿಗಳಾದ ರಾಜ್ಯಾಂಗ, ನ್ಯಾಯಾಂಗ ಹಾಗೂ ಶ್ರೀಮಂತ ವರ್ಗಗಳು ಅವರವರ ಹಿತಸಾಧನೆಗೆ ಒಂದಾಗುವುದರ ಪರಿಣಾಮದಿಂದ. ಅತ್ಯಾಚಾರಿಗೆ ಮರಣದಂಡನೆ ನೀಡುವುದು ನಿರಂಕುಶತೆಯ ರೂಪ. ಆದರೆ ಇಡೀ ರಾಜ್ಯಾಂಗ ವ್ಯವಸ್ಥೆಯನ್ನೆ ಖಂಡಿಸುವ, ಶಿಕ್ಷಿಸುವ ಅಗತ್ಯವಿದೆ.

ಅತ್ಯಾಚಾರಿಗಳಿಗೆ ಕ್ರೂರ ಶಿಕ್ಷೆ ನೀಡಬೇಕು. ಇದರಿಂದ ಇತರರು ಹೆದರಿಕೊಳ್ಳುತ್ತಾರೆ. ಒಬ್ಬಂಟಿಯಾಗಿಡುವ ಜೀವಾವಧಿ ಶಿಕ್ಷೆ ನೀಡಬೇಕು. ಮರಣದಂಡನೆ ನೀಡಿದರೆ ಆರೋಪಿಯ ಜೊತೆಗೆ ಆರೋಪವೂ ಮರೆತುಹೋಗುತ್ತದೆ. ಆದ್ದರಿಂದ ಆರೋಪಿಯನ್ನು ಜೀವಂತವಾಗಿಡಬೇಕು, ಆ ಮೂಲಕ ಇಂತಹ ರಾಕ್ಷಸರಿದ್ದಾರೆ ಎಂಬುದನ್ನು ಸಮಾಜ ನಿರಂತರವಾಗಿ ಮನವರಿಕೆ ಮಾಡಿಕೊಳ್ಳುತ್ತಿರಬೇಕು.

●

# ಕ್ರೈಸ್ತ ಸಂನ್ಯಾಸಿನಿಯರ ಮೇಲಿನ ಗುಂಪು ಅತ್ಯಾಚಾರದ ವಿರುದ್ಧ ಮೈಸೂರಿನಲ್ಲಿ ಪ್ರತಿಭಟನೆಯ ಕಹಳೆ

ಮಧ್ಯ ಪ್ರದೇಶದ ಜಭೂವಾ ಜಿಲ್ಲೆಯ ನವಾಪುರ ಭಂದಾರಿಯ ಗ್ರಾಮದಲ್ಲಿ ನಾಲ್ವರು ಕ್ರೈಸ್ತ ಸಂನ್ಯಾಸಿನಿಯರ ಮೇಲೆ ನಡೆದ ಗುಂಪು ಅತ್ಯಾಚಾರದ ವಿರುದ್ಧ ಮೈಸೂರು ನಗರದಲ್ಲಿ ನವೆಂಬರ್ ತಿಂಗಳ 5 ರಂದು ಒಂದು ಬೃಹತ್ ಮೆರವಣಿಗೆ ನಡೆಯಿತು. ಸಾವಿರ ಸಾವಿರ ಸಂಖ್ಯೆಯಲ್ಲಿ ಬಂದು ಭಾಗವಹಿಸಿದ್ದ ಮಹಿಳೆಯರು, ಪುರುಷರು ಮತ್ತು ಮಕ್ಕಳು ಇಡೀ ಜಿಲ್ಲೆಯ ವಿವಿಧ ಸಂಘಟನೆಗಳನ್ನು, ಶಾಲಾ ಕಾಲೇಜುಗಳನ್ನು, ರಾಜಕೀಯ ಪಕ್ಷಗಳನ್ನು ಪ್ರತಿನಿಧಿಸುವವರಾಗಿದ್ದರು. ಇವರ ಒಟ್ಟು ಸಂಖ್ಯೆ ನಾಲ್ಕರಿಂದ ಐದು ಸಾವಿರಗಳೆಂದು ಪತ್ರಿಕೆಗಳು ಅಂದಾಜಿಸಿದ್ದವಾದರೂ ಇದುವರೆಗೆ ನಗರದಲ್ಲಿ ನಡೆದಿದ್ದ ಯಾವುದೇ ಮೆರವಣಿಗೆಯಲ್ಲೂ ಕಾಣದ ಶಿಸ್ತು, ಸಂಯಮಗಳಿಂದ ಕೂಡಿದ ಜನಸಾಗರ ನೋಡುಗರ ಹೃದಯವನ್ನು ನೇರವಾಗಿ ಮುಟ್ಟಿತ್ತೆಂದರೆ, ಅಥವಾ ಜಿಲ್ಲಾಧಿಕಾರಿಗಳ ಕಛೇರಿಯ ಸುತ್ತ ನೆರೆದಿದ್ದ ಜನ ಸಮೂಹ ಸಂಖ್ಯೆ ದೃಷ್ಟಿಯಿಂದ ಹಾಗೂ ವಿಷಯದ ಗಹನತೆಯಿಂದ ಒಂದು ಐತಿಹಾಸಿಕ ಘಟನೆ ಯಾಗಿತ್ತೆಂದರೆ ಉತ್ಪ್ರೇಕ್ಷೆಯಲ್ಲ.

ದಿನಾಂಕ ಐದರ ಬೆಳಿಗ್ಗೆ 10 ಗಂಟೆಗೆ ನಗರದ ಪುರಭವನದ ಮೈದಾನದಲ್ಲಿ ಬಂದು ಸೇರಿದ್ದ ಜನರಿಗೆ ಇಂಥ ಪ್ರತಿಭಟನಾ ಮೆರವಣಿಗೆಗಳನ್ನು ಏರ್ಪಡಿಸುವುದರ ಉದ್ದೇಶ ಮತ್ತು ಅಗತ್ಯಗಳನ್ನು ಪುನರುಚ್ಚರಿಸಿದವರು ಮೈಸೂರು ವಿಶ್ವ ವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ. ಆರ್. ಇಂದಿರಾ, ಡಾ. ಎಡ್ವರ್ಡ್ ನರೋನಾ, ಸಿಸ್ಟರ್ ಕರೋನಾ, ಮತ್ತಿತರರು. ನಂತರದಲ್ಲಿ ಶಿಸ್ತಿನಿಂದ ಹೊರಟ ಮೌನ ಮೆರವಣಿಗೆ ದೊಡ್ಡ ಗಡಿಯಾರದ ವೃತ್ತದಿಂದ ಕೆ.ಆರ್. ವೃತ್ತ, ದೇವರಾಜ ರಸ್ತೆ ಮೂಲಕ ಸಾಗಿ ಜಿಲ್ಲಾಧಿಕಾರಿಯ ಕಛೇರಿಯ ಆವರಣವನ್ನು ತಲುಪುವ ವೇಳೆಗೆ ಅರ್ಧ ಗಂಟೆಗಿಂತ ಹೆಚ್ಚುಕಾಲ ತೆಗೆದು ಕೊಂಡಿತ್ತು. ಕೆ.ಆರ್. ವೃತ್ತದಂಥ ಚಟುವಟಿಕೆಗಳ ಕೇಂದ್ರ ಪ್ರದೇಶದಲ್ಲಿ ವಾಹನ ಸಂಚಾರ ಸ್ಥಗಿತಗೊಂಡುದು ಮಾತ್ರವಲ್ಲ,, ಸ್ತಬ್ದತೆ ಎಲ್ಲೆಲ್ಲೂ ಹರಡಿತ್ತು. ನೋವೇ ಮಡುಗಟ್ಟಿದ್ದ ಮೆರವಣಿಗೆಯಲ್ಲಿ ಮೌನವೆ ಮಾತಾಡಿತ್ತು.

ಮೆರವಣಿಗೆಯ ನೇತೃತ್ವವನ್ನು ನಗರದ ಬಿಷಪ್ ಜೋಸೆಫ್‌ರಾಯ್ ವಹಿಸಿದ್ದು, ಕ್ರೈಸ್ತ ಮಿಷನರಿಗಳು, ಶಿಕ್ಷಣ ಸಂಸ್ಥೆಗಳು ಅಧ್ಯಾಪಕರು, ವಿದ್ಯಾರ್ಥಿಗಳು ಹಾಗೂ ಸಿಬ್ಬಂದಿ ವರ್ಗದವರಲ್ಲದೆ, ಭಾಗವಹಿಸಿದ್ದ ವಿವಿಧ ಸಂಘ ಸಂಸ್ಥೆಗಳೆಂದರೆ, ಸಮತಾ ಪ್ರಗತಿಪರ ಮಹಿಳಾ ವೇದಿಕೆ, ಮಹಿಳಾ ಅಧ್ಯಯನ ಕೇಂದ್ರ, ಮೈತ್ರಿ ಮಹಿಳಾ ಒಕ್ಕೂಟ, ವಿಮೋಚನಾ ಬೀದಿ ಮಹಿಳೆಯರ ಒಕ್ಕೂಟ, ಧ್ವನಿ ಮಹಿಳಾ ಒಕ್ಕೂಟ, ಮಹಿಳೋದಯ ಒಕ್ಕೂಟ, ಅಲ್ಪಸಂಖ್ಯಾತರ ವೇದಿಕೆ, ಶ್ರೀರಂಗ ಪಟ್ಟಣದ ರಿವರ್‌ವ್ಯಾಲಿ ಸಂಸ್ಥೆ, ಆರ್.ಸಿ. ಚರ್ಚ್, ಮೈಸೂರಿನ ಒಡನಾಡಿ, ಜನಾಭಿವೃದ್ಧಿ ಸಂಸ್ಥೆ (ODP), ಅಂಜಲಿ ಆಶ್ರಮ, ಮದರ್ ಥೆರೆಸಾ ಚಾರಿಟಿ ಮಿಷನರಿಗಳು, ಮಹಾತ್ಮಗಾಂಧಿ ಸೇವಾ-ಸಂಘ ಇನ್ನೂ ಮುಂತಾದವುಗಳು. ಇವು ತಮ್ಮ ತಮ್ಮ ಬ್ಯಾನರುಗಳೊಂದಿಗೆ ಹಿಡಿದಿದ್ದ 'ನಿರಂಕುಶಾಧಿಪತಿಗಳ ದಬ್ಬಾಳಿಕೆಗೆ ಧಿಕ್ಕಾರ', 'ಮಹಿಳೆಯರ ಮೇಲಿನ ದೌರ್ಜನ್ಯ ನಿಲ್ಲಲಿ' 'ಅತ್ಯಾಚಾರವೆಸಗಿದ ಆರೋಪಿಗಳಿಗೆ ಶಿಕ್ಷೆಯಾಗಲಿ' 'ಕನ್ಯಾಸ್ತ್ರೀಯರು ಸಾವಿರಾರು ಜನರ ರಕ್ಷಕರು, ಪೋಷಕರು, ಅವರ ಗೌರವವನ್ನು ಉಳಿಸಿ' 'ಖಂಡಿಸಿ ಮಹಿಳೆಯ ಮೇಲಿನ ದೌರ್ಜನ್ಯ, ತೋರಿಸಿ ನಿಮ್ಮ ಉದಾರ ಸೌಜನ್ಯ' 'ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರಗಳಿಗೆ ಕೊನೆ ಎಂದು' ಸ್ತ್ರೀಯರ ಹಕ್ಕುಗಳನ್ನು ಗೌರವಿಸಿ, ಲಿಂಗಭೇದವನ್ನು ನಿಲ್ಲಿಸಿ', 'ಭ್ರೂಣ ಹತ್ಯೆ ನಿಲ್ಲಲಿ' 'ಸ್ತ್ರೀ ಪವಿತ್ರಳು, ಆಕೆಯನ್ನು ಮಲಿನ ಗೊಳಿಸಬೇಡಿ' 'ಲಿಂಗತಾರತಮ್ಯಕ್ಕೆ ಧಿಕ್ಕಾರ' ಮುಂತಾದ ಫಲಕಗಳು ಇಂದಿನ ಮಹಿಳೆಯರ ಪರಿಸ್ಥಿತಿಗೆ ಹಿಡಿದ ಕನ್ನಡಿಗಳಾಗಿದ್ದವು.

ಜಿಲ್ಲಾಧಿಕಾರಿಗಳ ಮೂಲಕ ಮಧ್ಯಪ್ರದೇಶದ ಮುಖ್ಯಮಂತ್ರಿ ಧಿಗ್ವಿಜಯಸಿಂಗರಿಗೆ ಬಿಷಪ್ ಜೋಸೆಫ್ ರಾಯ್ ನೀಡಿದ ಮನವಿ ಪತ್ರದಲ್ಲಿ ಗಾಂಧಿ ಮತ್ತು ಬುದ್ಧರ ನಾಡಾದ ಭಾರತ ಧಾರ್ಮಿಕ ಸಹಿಷ್ಣುತೆಗೆ ಹೆಸರಾಗಿದೆ. ಆದರೀಗ ನಡೆದ ಗುಂಪು ಅತ್ಯಾಚಾರ ಜನತೆಯಲ್ಲಿ ಆತಂಕ-ಭೀತಿಗಳನ್ನು ಹುಟ್ಟಿಸಿದೆ. ಇದನ್ನು ನಿವಾರಿಸಲು, ಈಗಿರುವ ತಪ್ಪು ಅಭಿಪ್ರಾಯಗಳನ್ನು ಹೋಗಲಾಡಿಸಲು, ಶಾಂತಿಯುತ ಸಹಬಾಳ್ವೆ ಸಾಧ್ಯವಾಗಿಸಲು ಅಂತರ್ಧರ್ಮೀಯ ಸಂವಾದಗಳನ್ನು ಏರ್ಪಡಿಸುವ ಮೂಲಕ ಮುಖ್ಯಮಂತ್ರಿಗಳು ಪ್ರಯತ್ನಿಸಬೇಕು.

ಮಧ್ಯಪ್ರದೇಶದ ಪೊಲೀಸರು ಅಲ್ಲಿಯ ಆದಿವಾಸಿಗಳ ಕಡೆ ಬೆರಳು ತೋರಿಸುತ್ತಿದ್ದಾರೆ. ಆದರೆ ಆದಿವಾಸಿಗಳು

ಇದುವರೆಗೆ ಇಂಥ ಕೃತ್ಯಕ್ಕೆ ಕೈಹಾಕಿದರವಲ್ಲ. ಈಗ ಬೇಕಾಗಿರುವುದು ನಿಜವಾದ ಅಪರಾಧಿಗಳ ಶೋಧ ಹಾಗೂ ಅಂಥವರಿಗೆ ಕಠಿಣ ಶಿಕ್ಷೆ. ಇದಕ್ಕಾಗಿ ನಿಷ್ಪಕ್ಷಪಾತವಾದ ತನಿಖೆ ನಡೆಯಲಿ' ಎಂದು ಒತ್ತಾಯಿಸಲಾಗಿದೆ.

ಈ ಬೃಹತ್ ರ್‍ಯಾಲಿಯಲ್ಲಿ ಮಂಡ್ಯ, ಮೈಸೂರು, ಚಾಮರಾಜನಗರ, ಮಡಿಕೇರಿ, ಹಾಸನಗಳಿಂದ ಬಂದ ಪ್ರಾಟೆಸ್ಟೆಂಟರು ಭಾವಹಿಸಿದ್ದರೆಂದು ವರದಿಯಾಗಿದೆ. ಅಲ್ಲದೆ ಅಂದು ಮಿಷನರಿ ಆಸ್ಪತ್ರೆಯಾದ ಹೋಲ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆಯ ಸಿಬ್ಬಂದಿ ವರ್ಗದವರು ಕಪ್ಪು ಬ್ಯಾಡ್ಜ್ ಧರಿಸಿ ಕೆಲಸ ಮಾಡುವ ಮೂಲಕ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆಂದು ತಿಳಿದುಬಂದಿದೆ.

*ವರದಿ : ವೆಂ. ವನಜ, ಮೈಸೂರು*

---

*11ನೇ ಪುಟದಿಂದ ಮುಂದುವರಿದಿದೆ.*

ಈ ವರದಿಯ ಶಿಫಾರಸ್ಸುಗಳನ್ನು ಕೂಡಲೇ ಜಾರಿಗೊಳಿಸುವಂತೆ ಸರ್ಕಾರವನ್ನು ಒತ್ತಾಯಿಸಲು 'ಅಖಿಲ ಭಾರತ ಕಿಸಾನ್ ಸಭಾ' ನೇತೃತ್ವದಲ್ಲಿ ಹಲವು ಹಂತದ ಚಳವಳಿಗಳನ್ನು ನಡೆಸಲಾಯಿತು. ಸರ್ಕಾರವೇ ನೀಡಿದ ವರದಿಯನ್ನು ಜಾರಿಗೊಳಿಸಲು ಗಮನ ನೀಡದೇ ಇದ್ದಾಗ 15-4-98ರಿಂದ ಅನಿರ್ದಿಷ್ಟ ನೀರು ಬಂದ್ ಚಳವಳಿಯನ್ನು ಆರಂಭಿಸಲಾಯಿತು. 96 ದಿನಗಳ ಅವಧಿಯಲ್ಲಿ ರೈತರು ಸಂಗ್ರಾಮ ನಗರವನ್ನೇ ನಿರ್ಮಿಸಿಕೊಂಡು ಅತ್ಯಂತ ಶಾಂತಿಯುತವಾಗಿ ಚಳವಳಿಯನ್ನು ನಡೆಸಿದರು. ಸರ್ಕಾರವು ರೈತರ ಬೇಡಿಕೆಗಳನ್ನು ಈಡೇರಿಸುವ ಬದಲು ಪೊಲೀಸ್ ಯಂತ್ರವನ್ನು ಬಳಸಿ ದಮನಕಾರಿ ನೀತಿಯಿಂದ ರೈತ ಚಳವಳಿಯನ್ನು ಹತ್ತಿಕ್ಕಿದರು.

ಜುಲೈ 19 ಮತ್ತು 20 ರಂದು ಈ ಗ್ರಾಮಗಳಲ್ಲಿ ಪೊಲೀಸರು ಜನರನ್ನು ಹಿಗ್ಗಾಮಗ್ಗ ಚಚ್ಚಿದ್ದಾರೆ, ಮನೆಗಳಿಗೆ ನುಗ್ಗಿ ದಾಂಧಲೆ ನಡೆಸಿದ್ದಾರೆ, ಆಸ್ತಿ-ಪಾಸ್ತಿ ಲೂಟಿ ಮಾಡಿದ್ದಾರೆ, ಸಿಕ್ಕಿದ ವಸ್ತುಗಳನ್ನೆಲ್ಲಾ ಚೂರು ಚೂರು ಮಾಡಿದ್ದಾರೆ, ಹೆಂಗಸರು-ಮಕ್ಕಳು- ಮುದುಕರು-ಮುದಿಕಿಯರು ಎಲ್ಲರಿಗೂ ಅತೀವ ಪೆಟ್ಟು ತಿನ್ನಿಸಿದ್ದಾರೆ. ಅನೇಕ ಮಹಿಳೆಯರೂ ವಿದ್ಯಾರ್ಥಿನಿಯರು ಸೇರಿದಂತೆ ಸುಳ್ಳು ಆಪಾದನೆಗಳಿಗೆ ಗುರಿಯಾಗಿ ಕೋರ್ಟಿಗೆ ಹಾರಾಗುವಂತೆ ನೂರಾರು ಜನರಿಗೆ ಕಿರುಕುಳ ನೀಡಿದ್ದಾರೆ. ಕುರುಡ-ಮೂಕ-ಕುಂಬಾರ-ನಾಯಿಂದ-ಮೋಚಿ ಮುಂತಾದವರನ್ನು ಅಂಗವಿಕಲರನ್ನಾಗಿಸಿದ್ದಾರೆ, ಕಾಯಿಲೆಯಿಂದ ನರಳುತ್ತಿದ್ದವರನ್ನು ಸಹ ಕ್ರೂರವಾಗಿ ಹೊಡೆದಿದ್ದಾರೆ ಮತ್ತು ಎಲ್ಲರನ್ನೂ ಅಸಭ್ಯ-ಅಶ್ಲೀಲ ಮಾತುಗಳಿಂದ ಹಂಗಿಸಿದ್ದಾರೆ ಬೈದಿದ್ದಾರೆ, ಮನನೋಯಿಸಿದ್ದಾರೆ, ದೈಹಿಕವಾಗಿ ಹಿಂಸಿಸಿದ್ದಾರೆ.

ನೂರಾರು ಮಹಿಳೆಯರು ಮೇಲೆ ಹಲ್ಲೆ ನಡೆದಿದ್ದರೂ ರಾಜ್ಯದ ಮಹಿಳಾ ಆಯೋಗ ಇನ್ನೂ ಚಕಾರವೆತ್ತಿಲ್ಲದಿರುವುದು ಶೋಚನೀಯ. ಅಸಂಖ್ಯಾತ ರೈತ ಜನರು ಹೇಳಲಾಗದ ಪ್ರಮಾಣದಲ್ಲಿ ಮಾನವ ಹಕ್ಕುಗಳನ್ನು ಕಳೆದುಕೊಂಡು ದೌರ್ಜನ್ಯಗಳಿಗೆ ಗುರಿಯಾಗಿದ್ದರೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಈವರೆಗೆ ಮಧ್ಯ ಪ್ರವೇಶ ಮಾಡಿಲ್ಲ.

ಬಾಗೂರು-ನವಿಲೆ ರೈತರ ಹೋರಾಟ ಕುರಿತು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದವರು ದಿನಾಂಕ 25-10-98ರಂದು ಮಲ್ಲೇಶ್ವರದ ಬಿ.ಪಿ. ಇಂಡಿಯನ್ ಶಾಲೆಯಲ್ಲಿ ಸಭೆಯೊಂದನ್ನು ಏರ್ಪಡಿಸಿದ್ದರು. ಬಾಗೂರು-ನವಿಲೆಯಲ್ಲಿ ಪೊಲೀಸರು ನಡೆಸಿದ ಹಲ್ಲೆ ಕುರಿತು ವಿಡಿಯೋ ಚಿತ್ರವನ್ನು ತೋರಿಸಲಾಯ್ತು. ರೈತರ ಹೋರಾಟದಲ್ಲಿ ತೊಡಗಿರುವ ಆಶಾ ಮತ್ತು ಸುಧಾ ಅವರು ತಮ್ಮ ಅನುಭವವನ್ನು ಹಂಚಿಕೊಂಡರು.

ಪೊಲೀಸರ ಹಲ್ಲೆಗೊಳಗಾದವರಿಗೆ ಸೂಕ್ತ ಪರಿಹಾರ ನೀಡಬೇಕು. ಹಲ್ಲೆಗೆ ಕಾರಣರಾದ ಪೊಲೀಸರ ಮೇಲೆ ಕ್ರಮ ಜರುಗಿಸಬೇಕು, ನ್ಯಾಯಂಗ ತನಿಖೆ ನಡೆಸಬೇಕು ಮತ್ತು ಏತ ನೀರಾವರಿಯಂತಹ ಸೌಲಭ್ಯಗಳನ್ನು ಒದಗಿಸಬೇಕೆಂದು ರಾಜ್ಯಪಾಲರಿಗೆ ಮನವಿ ಪತ್ರ ನೀಡುವ ಸಲುವಾಗಿ ಬಾಗೂರು-ನವಿಲೆ ರೈತರು 28-10-98ರಂದು ಕಾಲ್ನಡಿಗೆಯಲ್ಲಿ ಜಾಥ ಹೊರಟು ದಿನಾಂಕ 1-11-98ರಂದು ಬೆಂಗಳೂರಿಗೆ ಬಂದರು. ಯಶವಂತಪುರದಲ್ಲಿ ಅದೇ ದಿನ ಸಂಜೆ ಬಹಿರಂಗ ಸಭೆಯನ್ನು ಏರ್ಪಡಿಸಲಾಗಿತ್ತು. ಬೆಂಗಳೂರಿನ ಪ್ರಗತಿಪರ ಸಂಘಟನೆಗಳು ರೈತರನ್ನು ಸ್ವಾಗತಿಸಿ ತಮ್ಮ ಬೆಂಬಲ ಸೂಚಿಸಿದರು. ರೈತರು ದಿನಾಂಕ 2-11-98ರಿಂದ ಮಹಾತ್ಮ ಗಾಂಧಿ ರಸ್ತೆಯ ಗಾಂಧಿ ಪ್ರತಿಮೆಯ ಬಳಿ ಧರಣಿ ಆರಂಭಿಸಿದ್ದಾರೆ. ಅನೇಕ ಮಹಿಳಾ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು, ದಲಿತ ಸಂಘರ್ಷ ಸಮಿತಿ, ಇತರೆ ಪ್ರಗತಿ ಪರ ಸಂಘಟನೆಗಳು ರೈತರೊಂದಿಗೆ ಧರಣೆಯಲ್ಲಿ ಪಾಲ್ಗೊಳ್ಳುವ ಮೂಲಕ ತಮ್ಮ ಬೆಂಬಲ ವ್ಯಕ್ತಪಡಿಸಿದರು. ವಿಧಾನ ಪರಿಷತ್ತಿನಲ್ಲಿ 10ನೇ ತಾರೀಖಿನಂದು ವಿಷಯವನ್ನು ಚರ್ಚಿಸಿ ಪರಿಹಾರ ನೀಡಬೇಕು, ಸಿ.ಬಿ.ಐ. ತನಿಖೆಯಾಗಬೇಕು, ಪೊಲೀಸರ ಮೇಲೆ ಕ್ರಮ ಜರುಗಿಸಬೇಕೆಂದು ರಾಜಕಾರಣಿಗಳು ಮಾತಿನ ಚಕಮಕಿ ನಡೆಸಿದ್ದಾರೆ. ಎಷ್ಟರ ಮಟ್ಟಿಗೆ ಅದು ಜಾರಿಯಾಗುತ್ತದೆ ನೋಡಬೇಕು.

●

# ಯುದ್ಧೋದ್ರೇಕ

*ಮಧುಕೀಶ್ವರ್*

ನಾನು ಅಮೇರಿಕಾದಲ್ಲಿದ್ದಾಗ ಭಾರತ ನ್ಯೂಕ್ಲಿಯರ್ ಕ್ಲಬ್‌ನಲ್ಲಿ ಸೇರುವ ನಿರ್ಧಾರವನ್ನು ಮಾಡಿತು. ಈ ಉಪಗ್ರಹವನ್ನು ನೂರು ಬಾರಿಯಾದರೂ ಸುಟ್ಟುಬಿಡುವಷ್ಟು ಅಣ್ವಸ್ತ್ರಗಳನ್ನು ಅಮೇರಿಕ ಪೇರಿಸಿಟ್ಟುಕೊಂಡಿದೆ. ಅಣುವಿಕಿರಣದ ಗೋರಿಯಲ್ಲಿ ಮಾನವ ಜನಾಂಗವನ್ನೇ ಹೂತುಬಿಡುತ್ತದೆ. ಅಮೇರಿಕದ "ಮಾನವ ಜನಾಂಗವನ್ನು ನಾಶ ಮಾಡುವ" ಅಧಿಕಾರವನ್ನು ಕೇವಲ ಬೆದರಿಕೆಯ ತಂತ್ರವೆಂದು ಹೇಳಲಾಗುತ್ತಿದೆ. ಅಮೇರಿಕ ತನ್ನ ಸ್ವಪ್ರತಿಷ್ಠೆ ಹಾಗೂ ಸ್ವಸಮರ್ಥತೆಯಿಂದ ಭಾರತದ ಅಣುಶಕ್ತಿ ಕಾರ್ಯಕ್ರಮಗಳ ಬಗ್ಗೆ ಸದಾ ಅಸಹನೆ, ಸಿಟ್ಟನ್ನು ತೋರುತ್ತಲೇ ಬಂದಿದೆ. ಈ ಅಸಹನೆಯು ಕೆಲವು ಮೂಲಭೂತ ಪ್ರಶ್ನೆಗಳನ್ನು ಏತ್ತುತ್ತದೆ. ನಮಗೆ ಉಪದೇಶ ಮಾಡಲು ಅವರು ಯಾರು? ಈ ಸಂದರ್ಭದಲ್ಲಿ ನಾನು 'ಅಣುಶಕ್ತಿ' ಶಸ್ತ್ರೀಕರಣ ಪೈಪೋಟಿ ಇವುಗಳೆಲ್ಲದರ ನನ್ನೊಳಗಿರುವ ಪ್ರತಿಭಟನೆಯನ್ನು ಮರೆತೆ ಭಾರತೀಯಳಾಗಿದ್ದೆ. ನನ್ನಲ್ಲುಂಟಾದ ಗೊಂದಲಮಯ ಭಾವನಾತ್ಮಕ ಮನೋಭಾವನೆಯಿಂದ ಯೂರೋಪ್ ಹಾಗೂ ಉತ್ತರ ಅಮೇರಿಕದಲ್ಲಿ ವಾಸಿಸುವ ಭಾರತೀಯರು ರಾಷ್ಟ್ರೀಯತೆಯ ಬಲೆಯಲ್ಲಿ ಏಕೆ ಬೀಳುತ್ತಾರೆಂದು ನನಗೆ ಅರ್ಥವಾಯಿತು.

ಭಾರತ ಮಾತೆಯ ಸುಪ್ರಸಿದ್ಧ ಪುತ್ರ ಬಾಳಾ ಠಾಕ್ರೆ "ಈ ಅಣುಬಾಂಬ್ ಸ್ಫೋಟದ ಮೂಲಕ ನಾವು ಷಂಡರಲ್ಲ ಎಂಬುದನ್ನು ಸಾಬೀತುಗೊಳಿಸಿದ್ದೇವೆ." ಅವರು ಮುಕ್ತವಾಗಿ ತಮ್ಮ ದೌರ್ಬಲ್ಯವನ್ನು ಒಪ್ಪಿಕೊಂಡಿರುವುದನ್ನು ನಾನು ಪ್ರಶಂಸಿಸುತ್ತೇನೆ. ಬಾಳಾ ಠಾಕ್ರೆ ಹಾಗೂ ಶಿವಸೇನೆಯು ಕಳೆದ 25 ವರ್ಷಗಳಿಂದ ದ್ವೇಷವನ್ನು ಬಿತ್ತುವ ಗೂಂಡಾಗಿರಿಯಿಂದ ಕೂಡಿದ ಚಳುವಳಿಯನ್ನು ಗಮನಿಸಿದ್ದೇನೆ. ಗಂಭೀರವಾದ ತಾತ್ವಿಕತೆಯನ್ನು ಗೂಂಡಾಗಿರಿಯ ಮೂಲಕ ಕ್ರಿಯಾರೂಪಕ್ಕೆ ತರಲು ಪ್ರಯತ್ನಿಸುವ ವ್ಯಕ್ತಿಗಳು ಆಂತರಿಕವಾಗಿ ಪ್ರಕ್ಷುಬ್ಧ ಮನಸ್ಥಿತಿಯನ್ನು ಹೊಂದಿರುತ್ತಾರೆ. ಮಾನವ ದೇಹದ ಕೆಳಗಿನ ಅಂಗಗಳು ನಿಷ್ಕ್ರಿಯಗೊಂಡಾಗ ಮನಸ್ಸು ಹಾಗೂ ಹೃದಯ ಪ್ರಾಧಾನ್ಯತೆಯನ್ನು ಪಡೆಯುತ್ತದೆ. ಯಾರಾದರೂ ಹಿತೈಷಿಗಳು ಅಗ್ಗವಾಗಿ ದೊರೆಯುವ, ಅಪಾಯಕಾರಿಯಲ್ಲದ ಪುರುಷರ ಪುರುಷತ್ವದ ಸಾಮರ್ಥ್ಯವನ್ನು ಹೆಚ್ಚಿಸುವ ಪ್ರಯೋಗದ ಬಗ್ಗೆ ಸಲಹೆ ನೀಡುವುರೆಂದು ನಂಬಿದ್ದೇನೆ. ಠಾಕ್ರೆಯವರ ತೃಪ್ತಿಯ ಸಲುವಾಗಿ ದೇಶದ ಆರ್ಥಿಕ ಹಾಗೂ ರಾಜಕೀಯ ಹೊರೆಯನ್ನು ಖಂಡಿತಾ ಹೊರಬೇಕಾಗಿಲ್ಲ. ಯುದ್ಧೋದ್ರೇಕ ನೈಜತೆಗೆ ಪರ್ಯಾಯವಲ್ಲ. ನವಾಬ್ ಷರೀಫ್ ಸಹ ತಾನು ಷಂಡ ಪುರುಷನಲ್ಲವೆಂಬುದನ್ನು ಸಾಬೀತು ಪಡಿಸಲು ವಿಫಲವಾಗಿರುವುದರ ಬಗ್ಗೆ ಸಾಕಷ್ಟು ಟೀಕೆಗೆ ಒಳಗಾಗಿದ್ದಾರೆ. ಪುರುಷರ ಯುದ್ಧೋದ್ರೇಕವನ್ನು ಮೀರಿಸುವಂತೆ, ಬೆನ್‌ಜೀರ್ ಬುಟ್ಟೋ, ನವಾಬ್ ಷರೀಫ್‌ಗೆ ಬಳೆಗಳನ್ನು ನೀಡಿ, ಬಾಂಬ್ ಸ್ಫೋಟಿಸಿ ತನ್ನ ಪುರುಷತ್ವವನ್ನು ಭಾರತಕ್ಕೆ ತೋರಿಸಲು ವಿಫಲವಾದುದನ್ನು ನೆನಪಿಸಿದ್ದಾಳೆ. ಪಾಕಿಸ್ತಾನವನ್ನು ಆಳುವ ಹಕ್ಕು ಅವರಿಗಿಲ್ಲವೆಂದು ವಾದಿಸಿದ್ದಾಳೆ. ಬೆನ್‌ಜೀರಳ ಟೀಕೆ ಅವಳ ಬಗ್ಗೆಯೇ ಮರುಕವನ್ನುಂಟು ಮಾಡುವಂತಿದೆ. ಉನ್ನತ ರಾಜಕೀಯ ಅಧಿಕಾರ, ಸ್ಥಾನಮಾನವನ್ನು ಹೊಂದಿದ್ದರೂ ಗಂಡನಿಂದ ಹೊಡೆಸಿಕೊಳ್ಳುವುದು, ಒದೆಸಿಕೊಳ್ಳುವುದು, ಅವಮಾನವನ್ನು ಸಹಿಸಿಕೊಳ್ಳುವುದು, ಜನರು ಅವಳ ಬಗ್ಗೆಯೇ 'ಅಯ್ಯೋ' ಎಂದು ಮರುಕ ಪಡುವರು.

ಅಣುಬಾಂಬ್ ಸ್ಫೋಟವನ್ನು ಹುಚ್ಚು ಉನ್ಮಾದದಿಂದ ಸ್ವಾಗತಿಸುವುದು ಹಾಸ್ಯಮಯ ದುರಂತ ಸ್ಥಿತಿಯನ್ನು ಹುಟ್ಟುಹಾಕಿದೆ. ಇದುವರೆಗೆ ಅಣುಬಾಂಬ್ ಸ್ಫೋಟಕ್ಕೆ ಮೂಲ

*ಮಧುಕೀಶ್ವರ್ ಇಂಗ್ಲೀಷ್‌ನಲ್ಲಿ ಪ್ರಕಟವಾಗುವ ಮಹಿಳಾ ಪತ್ರಿಕೆಯಾದ 'ಮಾನುಷಿ'ಯ ಸಂಪಾದಕಿ. ಕೆಲವು ಸಮಸ್ಯೆಗಳ ಬಗ್ಗೆ ಗೊಂದಲಮಯವಾದ ನಿಲುವು ತೆಗೆದುಕೊಂಡರೆ, ಕೆಲವು ಸಮಸ್ಯೆಗಳ ಮೇಲೆ ಖಚಿತವಾದ, ನಿರ್ಣಯಾತ್ಮಕವಾದ ನಿಲುವುಗಳನ್ನು ತೆಗೆದುಕೊಳ್ಳುತ್ತಾರೆ. ತೀಕ್ಷ್ಣವಾಗಿ ಸ್ಪಂದಿಸುವ ಮದುಕೀಶ್ವರ್‌ರವರ 'ಅಣುಶಕ್ತಿಯ' ಬಗೆಗಿನ ಅಭಿಪ್ರಾಯವನ್ನು ಕನ್ನಡಕ್ಕೆ ಅನುವಾದಿಸಲಾಗಿದೆ.*

ಕಾರಣ. ಸಂದರ್ಭವನ್ನು ಕುರಿತು ಸರಿಯಾದ ಹೇಳಿಕೆಯನ್ನು ನೀಡಲಾಗಿಲ್ಲ. ಭಾರತದ ವಿರುದ್ಧವೇ? ಚೈನಾ? ಅಮೇರಿಕಾ? ಅಣ್ವಸ್ತ್ರಗಳನ್ನು ಹೊಂದಿದ ರಾಷ್ಟ್ರಗಳ ವಿರುದ್ಧವೇ? ಭಾರತ ಅಥವಾ ಪಾಕಿಸ್ತಾನದ ಮತದಾರರನ್ನೆ?

ಅಣುಬಾಂಬ್ ಸ್ಫೋಟದ ಸಾಧನೆಯನ್ನು ಕುರಿತು ಮಾತನಾಡಿದ ಬಿ.ಜೆ.ಪಿ. ವಕ್ತಾರ ಕೆ. ಆರ್. ಮಲ್ಕಾನಿ "ಭಾರತೀಯರು ನೇರವಾಗಿ ನಿಂತು ಬೇರೆಯವರ ಕಣ್ಣಲ್ಲಿ ಕಣ್ಣಿಟ್ಟು ನೋಡಲು ಸಾಧ್ಯವಾಗಿದೆಯೆಂದು ನುಡಿದಿದ್ದಾರೆ. ಮೊದಲು ನಾವು ಅಸಹಾಯಕರಂತೆ ಇದ್ದೆವು. ನಿರುಪದ್ರವಿಯಾದ ನನ್ನಂತವರ ಕಣ್ಣನ್ನು ನೇರವಾಗಿ ನೋಡುವುದರಲ್ಲಿ ಸಹ ಮಲ್ಕಾನಿಯವರಿಗೆ ಗಂಭೀರವಾದ ಸಮಸ್ಯೆಯ ಒಂದು ಚರಿತ್ರೆಯೇ ಇದೆ. ಸಾರ್ವಜನಿಕ ಸಭೆಗಳಲ್ಲಿ ಕಾಶ್ಮೀರದ ಸಭೆಯ ಬಗ್ಗೆ ನಮ್ಮಿಬ್ಬರಲ್ಲಿ ಭಿನ್ನಾಭಿಪ್ರಾಯ ಮೂಡಿದಾಗಲೆಲ್ಲಾ, ಭಿನ್ನವಾದ ಕುತಂತ್ರವಾದ ಮಾರ್ಗಗಳಿಂದ ನನ್ನನ್ನು ಎದುರಿಸುವ ಬದಲು ನೇರವಾಗಿ ಕಣ್ಣಲ್ಲಿ ನೋಡುವಂತೆ ಹೇಳಿದ್ದೇನೆ. ಆ ವಿಶ್ವಾಸವನ್ನು ಅವರಲ್ಲಿ ಮೂಡಿಸುವ ಹಂತದಲ್ಲಿ ನಾನು ಯಶಸ್ವಿಯಾಗಲಿಲ್ಲ. ಇದು ಮಲ್ಕಾನಿಯವರ ವ್ಯಕ್ತಿತ್ವದ ಸಮಸ್ಯೆಯೆಂದು ಮೊದಲು ನಾನು ಕಲ್ಪಿಸಿಕೊಂಡಿದ್ದೆ. ಇತ್ತೀಚಿನ ಅವರ ಹೇಳಿಕೆಗಳನ್ನು ಗಮನಿಸಿದರೆ, ಜನರ ಕಣ್ಣನ್ನು ನೇರವಾಗಿ ನೋಡುವುದು ಕೇವಲ ಅವರ ವೈಯಕ್ತಿಕ ಸಮಸ್ಯೆ ಮಾತ್ರವಲ್ಲ, ಅದು ಪಕ್ಷದ ಸಮಸ್ಯೆಯಾಗಿದೆ. ಅಣ್ವಸ್ತ್ರ ಪರೀಕ್ಷೆಯಿಂದಾಗಿ, ಬಿ.ಜೆ.ಪಿ. ಪಕ್ಷದವರು ಹೊರಗಿನವರನ್ನು ನೇರವಾಗಿ ನೋಡುವ ಧೈರ್ಯವನ್ನು ಗಳಿಸಿರುವುದರಿಂದ ನೇರವಾಗಿ ನಿಲ್ಲುವಂತಾಗಿದೆ. ಭಾರತದ ಕೋಟ್ಯಾಂತರ ಜನತೆಯ ಭವಿಷ್ಯವನ್ನು ಕೀಳರಿಮೆಯಿಂದ ನರಳುವವರ ಕೈಯಲ್ಲಿ ನೀಡಬಹುದೆ?

ಕಣ್ಣಲ್ಲಿ ಕಣ್ಣಿಟ್ಟು ನೇರವಾಗಿ ನಿಲ್ಲುವ, ಸಮಸ್ಯೆಯಿಲ್ಲದವರಿಗೆ ಅಣ್ವಸ್ತ್ರ ಪರೀಕ್ಷೆಯಿಂದ ಏನಾಗಬಲ್ಲದು! ಈ ಪ್ರಶ್ನೆಯನ್ನು ಮುಖ್ಯವಾಗಿ ಕೇಳಬೇಕಾಗುತ್ತದೆ. ಜಗತ್ತು ನಮ್ಮನ್ನು ಗಂಭೀರವಾಗಿ ಪರಿಗಣಿಸುತ್ತಿದೆಯೆ? ಭಾರತ ಅಣ್ವಸ್ತ್ರಗಳನ್ನು ಹೊಂದಿದ ದೇಶಗಳ ದ್ವಿಮುಖ ನೀತಿ, ಹಾಗೂ ಹಿಪಾಕ್ರಸಿಯನ್ನು ಬೆಳಕಿಗೆ ತರುವಲ್ಲಿ ಯಶಸ್ವಿಯಾಗಿದೆ. ರಾಜಕೀಯ ಪ್ರಭುತ್ವದ ಅಧಿಕಾರದ ಕ್ರೋಢೀಕರಣ ಗ್ಯಾರಂಟಿಗಾಗಿ ಅಣ್ವಸ್ತ್ರಗಳನ್ನು ಬಳಸುವ ಅವುಗಳ ಮೂರ್ಖತನದ ಬಗ್ಗೆ ಅರಿವು ಮೂಡಿಸಿದೆ. ಭಾರತ ಹಾಗೂ ಪಾಕಿಸ್ತಾನದಂತಹ ಬಡದೇಶಗಳು ಅಣ್ವಸ್ತ್ರಗಳನ್ನು ಹೊಂದಿರದ ರಾಷ್ಟ್ರಗಳು ಈ ಸ್ಪರ್ಧಾತ್ಮಕ ಪೈಪೋಟಿಯಿಂದ ಖಂಡಿತಾ ಹಿಂದುಳಿಯಲಾರವು.

ಅಂಕಲ್ ಸ್ಯಾಮ್, ಸ್ಟಾಲಿನ್, ಮಾವೊ ಮತ್ತು ಡೆಂಗ್ಸ್, ಸದ್ದಾಮ್ ಹುಸೇನ್, ಕೊಮೈನಿ, ಗಡಾಫಿಗಳು ಇತರೆ ದೇಶಗಳಲ್ಲಿ ಉಂಟುಮಾಡಿದ ಅತಂಕ ಪರಿಸ್ಥಿತಿಯನ್ನು ಬಿಟ್ಟರೆ? ಭಾರತ ಈ ಅಣುಬಾಂಬ್ ಸ್ಫೋಟದಿಂದ ಹೆಚ್ಚು ಮನ್ನಣೆ ಮತ್ತು ಗೌರವನ್ನು ಪಡೆಯಬಹುದೆ? ಬಾಂಬ್ ಸ್ಫೋಟದಿಂದ ಆರ್ಥಿಕ ದಿಗ್ಬಂಧನ ಉಂಟಾದ ಪರಿಣಾಮವನ್ನು ಕುರಿತು, ಜನ ವ್ಯಂಗ್ಯ ಹಾಗೂ ಸಿನಿಕತನದಿಂದ ಮಾತನಾಡುವುದನ್ನು ಕೇಳಿದ್ದೇನೆ. ಅಣುಸ್ಫೋಟವನ್ನು 'ಆತ್ಮಗೌರವಕ್ಕಾಗಿ ಸ್ಫೋಟ' (ಅಸಹಾಯಕತೆಯಿಂದ)ವೆಂದು ಜನರು ಉದ್ಗರಿಸಿದ್ದಾರೆ. ನನ್ನ ವಿದೇಶಿ ಪ್ರಯಾಣದ ಸಂದರ್ಭದಲ್ಲಿ ಪ್ರತಿಕ್ರಿಯೆಗಳು ಉತ್ತಮ ನಿದರ್ಶನಗಳನ್ನಾಗಿ ನೀಡಬಹುದು. ಭಾರತಕ್ಕೆ ಬರುತ್ತಿದ್ದ ಯುವತಿಯೊಬ್ಬಳು, ಭಾರತದಲ್ಲಿ ಉತ್ತಮವಾದ ಟಾಯ್ಲೆಟ್ ಪೇಪರ್ ಸಿಗುತ್ತಿದೆಯೋ ಅಥವಾ ಇಲ್ಲವೊ ಎಂಬುದರ ಬಗ್ಗೆ ಮಾಹಿತಿಯನ್ನು ಪಡೆಯಲು ಪ್ರಯತ್ನಿಸುತ್ತಿದ್ದಳು. ಹಾಂಗ್‌ಕಾಂಗ್ ಪ್ರವಾಸಿಗನೊಬ್ಬ ಉತ್ತಮವಾಧ ಕುಡಿಯುವ ನೀರು ಸಿಗುವುದಿಲ್ಲವೆಂದು ಚಿಂತಾಕ್ರಾಂತನಾಗಿದ್ದ. ಅವರಿಬ್ಬರು ಭಾರತದ ಅಣುಶಕ್ತಿಯ ಸಾಮರ್ಥ್ಯವನ್ನು ಕುರಿತು ಮಾತನಾಡುತ್ತಿದ್ದರು. ಅದರ ಮಾತುಕತೆಯ ಒಟ್ಟು ಸಾರಾಂಶ, ಉತ್ತಮವಾದ ಸಿನಿಮಾ ಹಾಲ್, ವಿದ್ಯುಚ್ಛಕ್ತಿ ಮುಂತಾದವುಗಳನ್ನು ಒದಗಿಸಲು ಸಾಧ್ಯವಿಲ್ಲದ ಭಾರತದ ಜನರು ಅಣು ಸ್ಫೋಟದಿಂದ ತಮ್ಮನ್ನು ತಾವೇ ಸ್ಫೋಟಿಸಿಕೊಳ್ಳುವುದು ಮಾತ್ರವಲ್ಲದೆ, ಅಣುವಿಕಿರಣದ ಸಮಾಧಿಯಲ್ಲಿ ಭಾರತವನ್ನು ಹೂತುಬಿಡುತ್ತಾರೆ. ಮತ್ತಿಬ್ಬರು ಪ್ರಯಾಣಿಕರು ವಿಮಾನದಿಂದ ಇಳಿದು ಬರುವ ಮೊದಲು ನೀಡುವ ಸುಂಕರಹಿತ ಮದ್ಯವನ್ನು ತೆಗೆದುಕೊಂಡರೆ, ಬ್ಯಾಗುಗಳು ಭಾರವಾಗುತ್ತವೆ ಎಂದು ಯೋಚಿಸಿ ಅದನ್ನೇ ದೆಹಲಿಯಲ್ಲಿ ಪಡೆಯಬಹುದೆಂದು ಸ್ವಾಗತಕಾರಿಣಿಗೆ ತಿಳಿಸಿದಾಗ, ಆಕೆ, "ಅದು ವಿದೇಶಿಯ ಮದ್ಯವಾಗಿದ್ದರೂ ಅದನ್ನು ಕಲಬೆರಕೆ ಮಾಡಲಾಗಿರುತ್ತದೆಯೆಂದಳು. ಆಗ ಅಲ್ಲಿದ್ದ ಅಮೇರಿಕದ ಪ್ರವಾಸಿಗರೊಬ್ಬ ಅಣುಶಕ್ತಿಯ ಪ್ಲಾಂಟುಗಳಲ್ಲೂ ಭ್ರಷ್ಟಾಚಾರ ನುಸುಳುವುದರಿಂದ, ಅಲ್ಲಿಯೂ ಕಲಬೆರಕೆ ಕಂಡುಬರುವುದು. ಅದು ಭಾರತದ ಜನರನ್ನು ರಕ್ಷಿಸಬಹುದು ಎಂದು ತಣ್ಣಗೆ ಪ್ರತಿಕ್ರಿಯಿಸಿದನು.

ಭಾರತದಲ್ಲಿ ಸರ್ವವ್ಯಾಪಿಯಾದ ಭ್ರಷ್ಟಾಚಾರದ ಬಗ್ಗೆ ಜಗತ್ತಿನ ಜನರು ಮಾತನಾಡುವುದು ಸರ್ವೇಸಾಮಾನ್ಯವಾಗಿದೆ.

ರಕ್ಷಣಾ ಕ್ಷೇತ್ರದಲ್ಲಿ ಸಹ ಭ್ರಷ್ಟಾಚಾರದ ಅಂಶ ಕಂಡುಬರುತ್ತಿರುವುದು ನಾಚಿಕೆಗೇಡಿನ ಸಂಗತಿಯಾಗಿದೆ.

ಇಂದಿರಾ ಗಾಂಧಿಯನ್ನು ಕೊಲೆ ಮಾಡಿದ್ದು ರಕ್ಷಣಾ ಪಡೆಗೆ ಸೇರಿದ ವ್ಯಕ್ತಿ. ಬ್ಲೂಸ್ಟಾರ್ ಆಪರೇಶನ್ ನಂತರ ಇಂದಿರಾ ಗಾಂಧಿಯವರಿಗೆ ಬಿಗಿಯಾದ ರಕ್ಷಣೆಯನ್ನು ನೀಡಲಾಗಿದ್ದರೂ, ರಕ್ಷಣಾ ಪಡೆಯವರಿಂದಲೇ ಅವರು ಕೊಲೆಯಾದರು. ಸಾಯುವ ಗಳಿಗೆಯಲ್ಲಿ ಸಹ ಪ್ರಾಥಮಿಕ ಚಿಕಿತ್ಸೆಯನ್ನು ನೀಡುವಲ್ಲಿ ನಮ್ಮ ವ್ಯವಸ್ಥೆ ವಿಫಲವಾಯಿತು. ಇಂದಿರಾ ಕೊಲೆಯಾಗಿ ಬಿದ್ದಾಗ, ಮನೆಯ ಬಳಿ ಇರಬೇಕಾಗಿದ್ದ ತುರ್ತುಚಿಕಿತ್ಸಾವಾಹನ ಸಹ ಸಿಗಲಿಲ್ಲ. ಯಾವುದೇ ತುರ್ತು ಚಿಕಿತ್ಸಾ ವ್ಯವಸ್ಥೆಯಿಲ್ಲದೆ ಅಂಬಾಸಿಡರ್ ಕಾರ್‌ನಲ್ಲಿ ಸೊಸೆ ಸೋನಿಯಾ ಗಾಂಧಿಯವರೊಂದಿಗೆ ತುಂಬಲಾಯಿತು. ಮೊದಲು ರಾಮ ಮನೋಹರ್ ಲೋಹಿಯಾ, ಆಸ್ಪತ್ರೆಯ ಗೇಟಿನ ಬಳಿ ಹೋಗುತ್ತಿದ್ದ ಹಾಗೆ ಮನಸ್ಸು ಬದಲಾಯಿಸಿ, ಇಂಡಿಯನ್ ಮೆಡಿಕಲ್ ಇನ್‌ಸ್ಟಿಟ್ಯೂಟ್‌ಗೆ ಕರೆದೊಯ್ಯಲಾಯಿತು. ಇಂದಿರಾ ಗಾಂಧಿ ರಕ್ತಸಿಕ್ತವಾಗಿ ಬಿದ್ದಿದ್ದಾಗ ಆತ್ಮಮೂಲ್ಯ ಗಳಿಗೆಗಳು ಹೀಗೆ ವ್ಯಯವಾದವು. ಆಸ್ಪತ್ರೆಯ ಗೇಟನ್ನು ತಲುಪುತ್ತಿದ್ದ ಹಾಗೆ ಇಂದಿರಾ ಗಾಂಧಿಯ ಪ್ರಾಣಪಕ್ಷಿ ಹಾರಿ ಹೋಯಿತು. ಅವರು ಮರಣ ಹೊಂದಿದ್ದಾರೆ ಎಂದು ಘೋಷಿಸುವ ಧೈರ್ಯವಿಲ್ಲದೆ, ಅವರಿಗೆ ರಕ್ತವನ್ನು ನೀಡಲಾಗುತ್ತಿತ್ತು. ದೇಶದ ಆಡಳಿತ ಜವಾಬ್ದಾರಿಯನ್ನು ವಹಿಸುವ ಮಗ ಬಳಿಯಿರದ ಪ್ರಯುಕ್ತ ಸಾವಿನ ಘೋಷಣೆಯನ್ನು ವಿಳಂಬಿಸಲಾಯಿತು. ಕಲ್ಕತ್ತದಲ್ಲಿ ಇದ್ದ ರಾಜೀವ ಗಾಂಧಿ ದೇಶದ ಸುದ್ದಿಯನ್ನು ಕೇಳಲು ಬಿ.ಬಿ.ಸಿ.ಯನ್ನು ಅವಲಂಬಿಸುತ್ತಿದ್ದರೇ ವಿನಃ ಭಾರತದ ಸುದ್ದಿ ಮಾಧ್ಯಮಗಳನ್ನಲ್ಲ. ಸರ್ಕಾರದಿಂದ ನಿಯಂತ್ರಣಗೊಂಡ ಸುದ್ದಿ ಮಾಧ್ಯಮಗಳು ಸಹ ಸತ್ಯಾಂಶವನ್ನು ಭಿತ್ತರಿಸುತ್ತದೆಯೆಂಬ ನಂಬಿಕೆ ಅವರಿಗೆ ಇರಲಿಲ್ಲ.

ಬಿಗಿ ಭದ್ರತೆಯನ್ನು ಒದಗಿಸಬೇಕಾದ ವ್ಯಕ್ತಿಗಳ ಜೀವನದಲ್ಲಿ ನಮ್ಮ ಸರ್ಕಾರಿ ಸಂಸ್ಥೆಗಳ ಕಾರ್ಯವೈಖರಿ ಇದಾದರೆ ಇತರ ಕ್ಷೇತ್ರಗಳಲ್ಲಿ ಇವು ಕೆಲಸ ಮಾಡುವ ವಿಧಾನವನ್ನು ನಾವೇ ಊಹಿಸಿಕೊಳ್ಳಬಹುದು. ಕೇವಲ ಪಾಕಿಸ್ತಾನ ಮಾತ್ರ ಭಾರತದ ರಾಜಕೀಯ ವ್ಯವಸ್ಥೆಯ ಅಸಮರ್ಥತೆಯನ್ನು ಹೋಲಬಹುದು. ಇಷ್ಟು ಅಸಮರ್ಥರ ಕೈಯಲ್ಲಿ ಭಯಂಕರ ವಾದ ಈ ಅಸ್ತ್ರಗಳನ್ನು ನಾವು ಕೊಡಬಹುದೆ?

ಭಾರತದ ಅಣುಶಕ್ತಿ ಕಾರ್ಯಗಳನ್ನು ವಿರೋಧಿಸುವ ಬಹುಪಾಲು ಜನರು, "ಕೋಟ್ಯಾಂತರ ಜನರಿಗೆ ಎರಡು ಹೊತ್ತಿನ ಊಟ, ಮೈತುಂಬ ಬಟ್ಟೆ, ಮನೆ, ಕೊಡಲಾಗದ ಸರ್ಕಾರ ಕೋಟ್ಯಾಂತರ ರೂ.ಗಳನ್ನು ಅಣುಶಕ್ತಿಯ ಕಾರ್ಯಕ್ರಮಗಳಿಗೆ ಚೆಲ್ಲುವುದು ಒಂದು ಘೋರವಾದ ಅಪರಾಧ ಎಂದು ಭಾವಿಸುತ್ತಾರೆ. ಇದೇ ಹಣವನ್ನು ಆರೋಗ್ಯ, ವಿದ್ಯಾಭ್ಯಾಸ ಇತರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವಲ್ಲಿ ತೊಡಗಿಸ ಬಹುದು. ಇರುವ ಸಂಪನ್ಮೂಲಗಳನ್ನು ಅಣುಶಕ್ತಿಯ ಕಾರ್ಯಕ್ರಮಗಳಿಗೆ ತೊಡಗಿಸುವುದು ಶ್ರೀಮಂತ ರಾಷ್ಟ್ರಗಳ ಯುದ್ಧದ ಆಟಗಳಿಗೆ ಸಮರ್ಥನೆ ನೀಡಿದಂತಾಗುತ್ತದೆ.

ಅಣುಸ್ಫೋಟ ಬಾಂಬ್ ಸ್ಫೋಟ ನಡೆಸಿದ ನಂತರ ಸಾವಿರಾರು ಪುಟಗಳಷ್ಟು ಈ ವಿಷಯದ ಸುತ್ತ ಬರೆಯಲಾಗಿದೆ. ಆದರೆ 'ಅಣ್ವಸ್ತ್ರ' ಎಷ್ಟು ನಿಗೂಢತೆಯಿಂದ ತುಂಬಿದೆಯೆಂದರೆ, ಜನರು ಕೇವಲ ಸರಕಾರದ ಪರವಾಗಿ ಅಥವಾ ವಿರೋಧವಾದ ನಿಲುವುಗಳನ್ನು ತೆಗೆದುಕೊಳ್ಳುತ್ತಾರೆಯೇ ವಿನಃ ಅಣ್ವಸ್ತ್ರ ರಾಜ್ಯದ ಮಿಲಿಟರಿ, ಆರ್ಥಿಕ, ರಾಜಕೀಯ, ಪರಿಣಾಮಗಳನ್ನು ಕುರಿತು ಸೂಕ್ತ ಮಾಹಿತಿ, ಅರಿವು, ತಿಳುವಳಿಕೆಯಿಂದ ಚರ್ಚಿಸುವವರು ತುಂಬಾ ಕಡಿಮೆ.

ಭಾರತದ ಅಣ್ವಸ್ತ್ರ ನೀತಿಯ ಬಗ್ಗೆ ವಸ್ತುನಿಷ್ಠವಾದ ವಿಶ್ಲೇಷಣೆಯನ್ನು ಮಾಡಬೇಕಾದರೆ ಈ ಕೆಳಗಿನ ವಿಷಯಗಳ ಬಗ್ಗೆ ಸೂಕ್ತವಾದ ಮಾಹಿತಿಯನ್ನು ಪಡೆಯಬೇಕಾಗುತ್ತದೆ. ಅಣುಬಾಂಬ್ ಸ್ಫೋಟದ ಅಗತ್ಯಕ್ಕೆ ಪ್ರೇರಕವಾದ ಅಂಶಗಳು ಯಾವುವು? ಅಣುಬಾಂಬ್ ಸ್ಫೋಟ ಅಣ್ವಸ್ತ್ರಗಳನ್ನು ತನ್ನ ಸೈನ್ಯದ ವ್ಯಾಪ್ತಿಗೆ ಸೇರಿಸುತ್ತದೆಯೆ? ಅಥವಾ ಅಣ್ವಸ್ತ್ರೀಕರಣ ದಿಂದ ಭಾರತ ದೂರವಿರುತ್ತದೆಯೆ? ಅಥವಾ ನಮ್ಮ ಸೈನ್ಯ ಎಷ್ಟರ ಮಟ್ಟಿಗೆ ಅಣ್ವಸ್ತ್ರೀಕರಣವನ್ನು ಸಾಧಿಸಿದೆ? ಶತ್ರುಗಳಿಂದ ನಿರೀಕ್ಷಿಸಲಾದ ಘರ್ಷಣೆಯಲ್ಲಿ ಕಾರ್ಯತಂತ್ರಕವಾಗಿ ನಮ್ಮ ಪರವಾಗಿರುವ ಅಂಶಗಳು ಯಾವುವು? ಅಣುಬಾಂಬ್ ಸ್ಫೋಟದ ಪರೀಕ್ಷೆಯಿಂದಾಗಿ ನಮ್ಮ ವಿಜ್ಞಾನಿ ಸಮುದಾಯವನ್ನು ಕುರಿತು ಏನು ಹೇಳುತ್ತದೆ? ಐವತ್ತು ವರ್ಷಗಳ ಹಿಂದಿನ ಸಾಧನೆಯ ಬಗ್ಗೆ ನಾವು ಏನು ಹೇಳುತ್ತೇವೆ. ಶಾಂತಿಗಾಗಿ ಅಣುಪರೀಕ್ಷೆ ಅಥವಾ ಅಣ್ವಸ್ತ್ರಗಳಿಗಾಗಿ ಎಂಬುದರ ಬಗ್ಗೆ ನೈಜವಾದ ವ್ಯತ್ಯಾಸ ಏದೆಯೆ?

ಅಣುವ್ಯವಸ್ಥೆಗಳು ಎಷ್ಟರ ಮಟ್ಟಿಗೆ ಸುರಕ್ಷಿತವಾಗಿವೆ. ಅವುಗಳ ಬಗ್ಗೆ ಎಷ್ಟು ಗೊತ್ತಿವೆ? 'ಅಣ್ವಸ್ತ್ರೀಕರಣದ' ಬಗ್ಗೆ ನಮಗೆ ಸಂಪೂರ್ಣ ನಿಯಂತ್ರಣವಿದೆಯೆ? ಅದರ ಬಗ್ಗೆ ನಮಗೆ

ಸಂಪೂರ್ಣ ಮಾಹಿತಿ ನಮಗಿದೆಯೆ? ಪ್ರಸ್ತುತ ರಾಜಕೀಯ ತಾಂತ್ರಿಕ, ಸಾಂಸ್ಥಿಕ ನಿಯಂತ್ರಣ, ಅಭಿವೃದ್ಧಿಯ ಬಗ್ಗೆ, ಭಾರತ ಹಾಗೂ ಪಾಕಿಸ್ತಾನ ಎರಡೂ ದೇಶಗಳನ್ನು ನಾಶ ಮಾಡದಿರುವಂತಹ ಖಚಿತತೆಯನ್ನು ಹೊಂದಿದೆಯೆ? ಅಣುಬಾಂಬಿನ ಉದ್ದೇಶ ಹಾಗೂ ಭದ್ರತಾ ಪಡೆಯ ಮುಖ್ಯಸ್ಥರು ನೀಡುತ್ತಿರುವ ಹೇಳಿಕೆಗಳು ದ್ವಂದ್ವಮಯವಾಗಿದ್ದು, ವಿರೋಧಾಭಾಸದಿಂದ ಕೂಡಿರುವುದರ ಅರ್ಥವೇನು? ಚೈನಾದ ಬೆದರಿಕೆ, ಪಾಕಿಸ್ತಾನದಿಂದ ರಕ್ಷಿಸಿಕೊಳ್ಳಲು ನೀಡಿರುವ ಪ್ರತಿಕ್ರಿಯೆಯೆ? ಅಥವಾ ಕಾಶ್ಮೀರದಲ್ಲಿನ ಕೃತಕ ಯುದ್ಧವೆ? ಅಥವಾ ಇತರ ದೇಶಗಳ ಬೆದರಿಕೆ ವಾಸ್ತವವಾದದ್ದೆ? ಅಥವಾ ರಾಜಕೀಯ ಅಧಿಕಾರ ಹೊಂದಿರುವವರು ಕೃತಕವಾಗಿ ಸೃಷ್ಟಿಸುತ್ತಿರುವ ಭ್ರಮೆಯೆ? ಭಾರತದ ಶತ್ರು ಪಾಕಿಸ್ತಾನ ಹಾಗೂ ಚೈನಾ ಮಾತ್ರವಾಗಿದ್ದರೆ ಇತರೆ ಪ್ರಬಲ ರಾಷ್ಟ್ರಗಳೊಂದಿಗೆ ಸೆಣಸಾಟಕ್ಕೆ ಇಳಿದುದರ ಅರ್ಥವೇನು? ಐದು ರಾಷ್ಟ್ರಗಳ ಅಣ್ವಸ್ತ್ರ ಸ್ಫೋಟದ ತಂತ್ರದಿಂದ ನಿಶಸ್ತ್ರೀಕರಣವನ್ನು ನಮ್ಮ ಮೇಲೆ ಹೊರೆ ಬಯಸುವ ಪ್ರಬಲ ರಾಷ್ಟ್ರಗಳ ದ್ವಿಮುಖ ನೀತಿಯನ್ನು ಬಯಲಿಗೆಳೆಯುತ್ತಿದ್ದೇವೆಯೆ?

ಶಸ್ತ್ರೀಕರಣದ ಪರವಾಗಿರುವ ರಾಜಕೀಯ ನಾಯಕರು ಹಾಗೂ ವಿಜ್ಞಾನಿಗಳು "ಅಣ್ವಸ್ತ್ರಗಳನ್ನು ಕೇವಲ ಶತ್ರುಗಳನ್ನು ಬೆದರಿಸುವ ಉದ್ದೇಶದಿಂದ ಎಂದು ವಾದಿಸುತ್ತಾರೆ. ಅಣುಬಾಂಬಿನಿಂದ ಯಾರನ್ನು ಹೆದರಿಸುತ್ತಿದ್ದೇವೆ? ಯಾವ ನಿರ್ದಿಷ್ಟ ಸಂದರ್ಭದಲ್ಲಿ ಅಣುಬಾಂಬನ್ನು ಉಪಯೋಗಿಸುತ್ತೇವೆ. ನಮ್ಮ ಅಣುಶಕ್ತಿ ನೀತಿಯನ್ನು ಸ್ಪಷ್ಟವಾಗಿ ವಿದೇಶಗಳ ಮುಂದೆ ಇಟ್ಟಿದ್ದೇವೆಯೆ? ಬಾಂಬ್ ಸ್ಫೋಟದಿಂದ ಏಷ್ಯಾ ಖಂಡದಲ್ಲಿ ನಮ್ಮ ಘನತೆ ಹೆಚ್ಚಿದೆಯೆ? ಅಥವಾ ಬಾಂಬ್ ಸ್ಫೋಟಕ್ಕೆ ಮೊದಲು ನಮ್ಮೊಂದಿಗಿದ್ದ ದೇಶಗಳ ಸ್ನೇಹವನ್ನು ನಾವು ಕಳೆದುಕೊಂಡಿದ್ದೇವೆಯೆ?

ಕಾಶ್ಮೀರದ ಸಮಸ್ಯೆಯನ್ನು ಅಂತರರಾಷ್ಟ್ರೀಯ ಸಮಸ್ಯೆಯನ್ನಾಗಿಸುತ್ತಾ ಪಾಕಿಸ್ತಾನದ ಪ್ರಯತ್ನವನ್ನು ವಿರೋಧಿಸುವ ಭಾರತವೇ ಅಣುಬಾಂಬ್ ಸ್ಫೋಟದಿಂದಾಗಿ ಕಾಶ್ಮೀರದ ಸಮಸ್ಯೆಯನ್ನು ಹೆಚ್ಚು ಅಂತರ ರಾಷ್ಟ್ರೀಯಗೊಳಿಸಿದೆ. ಶಸ್ತ್ರೀಕರಣದಿಂದ ಕಾಶ್ಮೀರದ ಸಮಸ್ಯೆ ಹೆಚ್ಚು ಸಂಕೀರ್ಣಗೊಂಡಿಲ್ಲವೆ?

ಸರಕಾರ ಅಣ್ವಸ್ತ್ರಗಳ ತಯಾರಿಕೆಯಲ್ಲಿ ಪರಿಗಣಿಸಬೇಕಾದ ಸೂಕ್ಷ್ಮವಾದ ತಾಂತ್ರಿಕ ಅಂಶಗಳು ಯಾವುವು? ಶಸ್ತ್ರೀಕರಣದಿಂದ ಭಾರತ ಜನರ ಮೇಲೆ ಬೀರುವ ರಾಜಕೀಯ ಹಾಗೂ ಆರ್ಥಿಕ ಪರಿಣಾಮಗಳು ಯಾವುವು? ಬಾಂಬ್ ಸ್ಫೋಟದಿಂದಾಗಿ ಭಾರತ ಹಾಗೂ ಪಾಕಿಸ್ತಾನ ಮಿಲಿಟರಿ ಸಾಮರ್ಥ್ಯದ ಬಗ್ಗೆ ವೈಜ್ಞಾನಿಕ ಅಂಕಿ ಅಂಶ ಹಾಗೂ ವಿಶ್ಲೇಷಣೆಯೇನು? ಶಸ್ತ್ರೀಕರಣದಿಂದ ಜಗತ್ತಿನ ಜನರ ಮೇಲೆ ಉಂಟಾದ ಪರಿಣಾಮವೇನು? ವಿಶೇಷವಾಗಿ ದಕ್ಷಿಣ ಏಷ್ಯಾದ ರಾಜಕೀಯ ಪರಿಸ್ಥಿತಿಯಲ್ಲಿ ಅಸ್ಥಿರತೆಗೆ ಉಂಟಾಗಲು ಕಾರಣವೇನು? ಈ ಹಂತದಲ್ಲಿ ಪಾಕಿಸ್ತಾನ ಒತ್ತಡಕ್ಕೆ ಮಣಿದು ಇಸ್ಲಾಂ ದೇಶಗಳೊಂದಿಗೆ ಮಿಲಿಟರಿ ವ್ಯಾಪಾರದಿಂದ ತನ್ನ ಆರ್ಥಿಕ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳುವುದರ ಮೂಲಕ ದುರಂತವನ್ನು ತಾನೇ ಆಹ್ವಾನಿಸಿಕೊಳ್ಳಬಹುದು. ಲಿಬಿಯಾದಂತಹ ಚಿಕ್ಕಪುಟ್ಟ ದೇಶಗಳು ಭಾರತ ಅಥವಾ ಪಾಕಿಸ್ತಾನದಿಂದ ಅಣುಶಕ್ತಿಯ ತಂತ್ರಜ್ಞಾನವನ್ನು ರಫ್ತು ಮಾಡಿಕೊಳ್ಳಬಯಸುತ್ತವೆ.

ಚಾರಿತ್ರಿಕವಾದ ಕೆಲವು ಅಂಶಗಳನ್ನು ನಾವು ಗಮನಿಸಬೇಕಾಗುತ್ತದೆ. ದಕ್ಷಿಣ ಆಫ್ರಿಕಾ ಅಣುಬಾಂಬನ್ನು ಸಂಪೂರ್ಣವಾಗಿ ತಿರಸ್ಕರಿಸಿದೆ. ಮಾಜಿ ಸೋವಿಯತ್ ಒಕ್ಕೂಟದಿಂದ ಮೂಡಿಬಂದ ಹಲವಾರು ದೇಶಗಳು ಇಂದು ತಮ್ಮ ರಾಜಕೀಯ ಹಾಗೂ ಆರ್ಥಿಕ ಸ್ಥಿರತೆಗಾಗಿ ನಿಶಸ್ತ್ರೀಕರಣ ದತ್ತವಾಲಿವೆ. ಈ ಅನುಭವಗಳಿಂದ ಭಾರತ ಹಾಗೂ ಪಾಕಿಸ್ತಾನ ಏನನ್ನು ಕಲಿಯಲಾರವೆ? ಭಾರತ ಹಾಗೂ ಪಾಕಿಸ್ತಾನ ತಮ್ಮ ಅಣ್ವಸ್ತ್ರ ಪೈಪೋಟಿಯನ್ನು ಬಿಟ್ಟು ಪೂರ್ವ ಯೂರೋಪಿನ ದೇಶಗಳು ಹಾಗೂ 1990 ರಿಂದ ರಷ್ಯಾ ಸಹ ಅಳವಡಿಸಿಕೊಂಡ ಹಾಗೆ ಬೇರೆ ದೇಶಗಳಿಂದ ವಾಣಿಜ್ಯ ಹಾಗೂ ವ್ಯಾಪಾರ ಸಹಕಾರವನ್ನು ಪಡೆಯಬಾರದೇಕೆ! ದೇಶದ ಭದ್ರತೆಯ ಹೆಸರಿನಲ್ಲಿ ಅಣುಶಕ್ತಿಯ ಸಂಕೀರ್ಣ ಸಮಸ್ಯೆಯನ್ನು ಸರಳೀಕರಿಸಬಾರದು. ಬದಲಾಗಿ ರಾಜಕೀಯ ವ್ಯಕ್ತಿಗಳು, ಅಧಿಕಾರವನ್ನು ಹೇಗೆ ಗಳಿಸುತ್ತಾರೆ, ಅವರ ಸಾಮಾಜೀಕರಣ, ಅವರಿಗಿರುವ ಅಧಿಕಾರವನ್ನು ಮಹತ್ವವನ್ನು ಅವರು ಅರ್ಥಮಾಡಿಕೊಳ್ಳುವ ರೀತಿ, ಕೋಟ್ಯಾಂತರ ಜನರ ನೈಜ ಪ್ರತಿನಿಧಿ ಯಾರು? ಈ ಕೆಲವು ಮಹತ್ವದ ಪ್ರಶ್ನೆಗಳನ್ನು ಮುಂದಿನ ಮಾನುಷಿಯ ಸಂಚಿಕೆಗಳಲ್ಲಿ ಉತ್ತರಿಸುವ ಪ್ರಯತ್ನವನ್ನು ಮಾಡಲಾಗುತ್ತದೆ.

# ಕೆಲಸ ಮಾಡುವ ಸ್ಥಳದಲ್ಲಿ ಲೈಂಗಿಕ ಕಿರುಕುಳ
# ಸರ್ವೋಚ್ಚ ನ್ಯಾಯಾಲಯದ ತೀರ್ಪು ತಿರುಚಿದವರ ಕೈಯಲ್ಲಿ

ಒಂದು ವರ್ಷದ ಹಿಂದೆ ಆಗಸ್ಟ್ ೧೩, ೧೯೯೭ರಂದು ಸರ್ವೋಚ್ಚ ನ್ಯಾಯಾಲಯವು ಕೆಲಸ ಮಾಡುವ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳವನ್ನು ಅಪರಾಧವೆಂದು ಪರಿಗಣಿಸಬೇಕೆಂದು ತೀರ್ಪನ್ನಿತ್ತಿತು. ಮತ್ತು ಕೆಲವು ಮಾರ್ಗದರ್ಶಿಗಳನ್ನು ಸೂಚಿಸಿತು. ಈ ತೀರ್ಪು ಮಹಿಳೆಯರಿಗೆ ಸುರಕ್ಷಿತ, ಅನುಕೂಲಕರ ವಾತಾವರಣವನ್ನು ಕೆಲಸ ಮಾಡುವ ಸ್ಥಳದಲ್ಲಿ ಹುಟ್ಟು ಹಾಕುವಲ್ಲಿ ಮಹತ್ತರವಾದ ಹೆಜ್ಜೆ ಎಂದು ಪರಿಗಣಿಸಿದ ಮಹಿಳಾ ಗುಂಪುಗಳು, ಮಾರ್ಗದರ್ಶಿಯನ್ನು ಕುರಿತು ಸಕ್ರಿಯವಾದ ಆಂದೋಲನವನ್ನು ಪ್ರಾರಂಭಿಸಿದುವು. ಅದರ ಅಂಗವಾಗಿ ದೆಹಲಿಯ 'ಸಹೇಲಿ' ಮಹಿಳಾ ಗುಂಪು ತೆಗೆದುಕೊಂಡ ಕೇಸ್‌ನ ವರದಿಯನ್ನು ಈ ಲೇಖನದಲ್ಲಿ ಪ್ರಕಟಿಸುತ್ತಿದ್ದೇವೆ. ಇದು ಸರ್ವೋಚ್ಚ ನ್ಯಾಯಾಲಯ ನೀಡಿದ ಮಾರ್ಗದರ್ಶಿಯ ಕಾರ್ಯರೂಪ ಕುರಿತಂತೆ ಅನೇಕ ಹೊಳಹುಗಳನ್ನು ನೀಡಬಹುದು.

ಸುಶೀಲ (ನಿಜ ಹೆಸರಲ್ಲ) ಗಜಿಯಾಬಾದ್‌ನ ಔಷಧ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಳು. ಆಕೆ ಒಳ್ಳೆಯ ಕೆಲಸಗಾರ್ತಿ, ಕೆಲಸಮಾಡಿದ ಎರಡು ವರ್ಷದ ಅವಧಿಯಲ್ಲಿ ಆಕೆಯ ಕೆಲಸ ಕುರಿತಂತೆ, ಅವಳ ನಡತೆ ಕುರಿತು ಯಾವುದೇ ತಪ್ಪಿನ ಸಂದರ್ಭಕ್ಕೆ ಅವಕಾಶ ನೀಡಿಲ್ಲವೆಂದು ಆಡಳಿತ ಮಂಡಲಿಯೇ ಒಪ್ಪಿಕೊಂಡಿದೆ. ಆದರೂ ಕಳೆದ ಒಂದು ವರ್ಷದಿಂದ ಆಕೆ ಇನ್ನಿಲ್ಲದ ತೊಂದರೆ ಅನುಭವಿಸುತ್ತಿದ್ದಾಳೆ. ಬದುಕೇ ಒಂದು ಹೋರಾಟವಾಗಿದೆ ಆಕೆಗೆ.

ಕೆಲಸ ಮಾಡುವ ಕಂಪನಿಯ ಸ್ವಚ್ಛತೆಯ ಗುತ್ತಿಗೆದಾರನಾದ ರಾಜೇಂದ್ರ ಸೈನಿಯ ಚೇಷ್ಟೆಯಂಥ ಲೈಂಗಿಕ ಕಿರುಕುಳಕ್ಕೆ ಒಳಗಾದಳು. ಅಂತಹ ಸಂದರ್ಭದಲ್ಲಿ ಯಾವುದೇ ಹುಡುಗಿ ಮಾಡುವಂತೆ ಆಕೆಯೂ ಅವನ ಕಿರುಕುಳವನ್ನು ಕಡೆಗಣಿಸಿ ಸಹಿಸಿಕೊಂಡು ತನ್ನ ಕೆಲಸ ನಿರ್ವಹಿಸುತ್ತಿದ್ದಳು. ಮುಂದೆ ಅವನ ಕಿರುಕುಳ ತಡೆಯಲಸಾಧ್ಯವಾದ ಸ್ಥಿತಿ ತಲುಪಿತು. ೧೯೯೭ ನವೆಂಬರ್ ೩ ರಂದು ರಾಜೇಂದ್ರ ಅಶ್ಲೀಲ ಹಾಡನ್ನು ಹಾಡಿ ಅವಳೊಂದಿಗೆ ಅಸಭ್ಯವಾಗಿ ವರ್ತಿಸಿದ. ಆಕೆ ವಿರೋಧಿಸಿದರೂ ಸುಮ್ಮನಾಗದೆ, ತಳ್ಳಿ-ಸವರಿ ದೈಹಿಕವಾಗಿಯೂ ಕಿರುಕುಳ ನೀಡಿದ.

ನೋವು, ಕಿರುಕುಳವನ್ನು ಸಹಿಸಿಕೊಳ್ಳಬಾರದೆಂದು ಸುಶೀಲ ಆದಿನವೆ ಆಡಳಿತ ವಿಭಾಗದ ವ್ಯವಸ್ಥಾಪಕರಿಗೆ ದೂರು ಪತ್ರ ಸಲ್ಲಿಸಿದಳು. ಆ ದಿನದಿಂದಲೆ ಕೊನೆಯಿಲ್ಲದ ಸಂಕಷ್ಟಕ್ಕೆ ಆಕೆ ಸಿಕ್ಕಿ ಹಾಕಿಕೊಂಡಳು.

**"ಹೊರಗಿನ ಅಥವಾ ಮೂರನೆ ವ್ಯಕ್ತಿಯಿಂದ ಲೈಂಗಿಕ ಕಿರುಕುಳ ಉಂಟಾದಲ್ಲಿ ಮಾಲೀಕ ಅಥವಾ ಸಂಬಂಧಪಟ್ಟ ಅಧಿಕಾರಿಯು ಸೂಕ್ತ ಕ್ರಮವನ್ನು ತೆಗೆದುಕೊಂಡು ಕಿರುಕುಳವನ್ನು ತಡೆಯುವ ಮೂಲಕ ಕಿರುಕುಳಕ್ಕೆ ಒಳಗಾದ ವ್ಯಕ್ತಿಯನ್ನು ರಕ್ಷಿಸಬೇಕು"** ಎಂದು ಸರ್ವೋಚ್ಚ ನ್ಯಾಯಾಲಯದ ಮಾರ್ಗದರ್ಶಿ ಹೇಳುತ್ತದೆ. ಮೇಲಿನ ಸಂದರ್ಭದಲ್ಲಿ ಕಿರುಕುಳ ನೀಡಿದ ವ್ಯಕ್ತಿ ಕಂಪೆನಿಯ ಉದ್ಯೋಗಿಯಲ್ಲದಿದ್ದರೂ ಗುತ್ತಿಗೆದಾರನಾಗಿ ಕೆಲಸದ ಸ್ಥಳಕ್ಕೆ ಬರುವ ಅವಕಾಶ ಹೊಂದಿದ್ದ. ಅಲ್ಲದೆ ಅಲ್ಲಿನ ಉದ್ಯೋಗಿಗೆ ಕಿರುಕುಳ ನೀಡಿದ್ದ. ಸುಶೀಲ ನೀಡಿದ ದೂರು ಪತ್ರದ ಆಧಾರದ ಮೇಲೆ ರಾಜೇಂದ್ರ ಕೆಲಸದ ಸ್ಥಳಕ್ಕೆ ಬರಬಾರದೆಂದು ನಿರ್ಬಂಧ ಹೇರಲಾಯ್ತು. ಆದರೆ ಅವನ ಗುತ್ತಿಗೆಯನ್ನ ರದ್ದು ಪಡಿಸಲಿಲ್ಲ. ಕಿರುಕುಳಕ್ಕೆ ಒಳಗಾದ ಸುಶೀಲಳನ್ನು ಅವಳು ದೂರು ಪತ್ರ ನೀಡಿದ ದಿನದಿಂದಲೇ ಅಮಾನತ್ತುಗೊಳಿಸಲಾಗಿತ್ತು.

ಸರ್ವೋಚ್ಚ ನ್ಯಾಯಾಲಯದ ಮಾರ್ಗದರ್ಶಿಗನುಗುಣವಾಗಿ ಸುಶೀಲಳ ದೂರನ್ನು ಪರಿಗಣಿಸದ ಕಂಪೆನಿಯು ಆಕೆ ರಾಜೇಂದ್ರನನ್ನು ಬೈಯ್ದಳೆಂದು ಮತ್ತು ಅವನನ್ನು ಚಪ್ಪಲಿಯಲ್ಲಿ ಹೊಡೆದಳೆಂದು ಆ ಮೂಲಕ ಆಕೆ ಕಂಪೆನಿಯ ಶಿಸ್ತನ್ನು ಉಲ್ಲಂಘಿಸಿರುವಳೆಂಬ ಪತ್ರವನ್ನು ನೀಡಿತು. ಹೆಣ್ಣು ಮಕ್ಕಳು ಲೈಂಗಿಕ ಕಿರುಕುಳದ ವಿರುದ್ಧ ದನಿ ಎತ್ತದೆ ಮೌನವಾಗಿ ಸಹಿಸಿಕೊಂಡಿರಬೇಕೆಂಬ ಉದ್ದೇಶವನ್ನು ಪತ್ರ ಸಾಬೀತು ಪಡಿಸುತ್ತದೆ.

**"ಅಗತ್ಯವಾದ ಎಲ್ಲಾ ಕ್ರಮಗಳನ್ನೂ ಕೈಗೊಂಡು ಲೈಂಗಿಕ ಕಿರುಕುಳವನ್ನು ತಡೆಯುವ, ಕಿರುಕುಳ ಸಂಭವಿಸಿದಲ್ಲಿ ಪರಿಹರಿಸುವ, ಅಪರಾಧಿಯನ್ನು ಶಿಕ್ಷಿಸುವ ಜವಾಬ್ದಾರಿ ಕೆಲಸ ಮಾಡುವ ಸ್ಥಳದ ಮಾಲೀಕ ಅಥವಾ ಸಂಬಂಧಪಟ್ಟ ಅಧಿಕಾರಿಯದು"** ಎಂದು ಮಾರ್ಗದರ್ಶಿ ಹೇಳುತ್ತದೆ.

ಸರಿಯಾದ ನಿಟ್ಟಿನಲ್ಲಿ ಕೇಸನ್ನು ಪರಿಶೀಲಿಸಬೇಕೆಂದು 'ಸಹೇಲಿ' ಆಡಳಿತ ಮಂಡಳಿಯವರನ್ನು ಒತ್ತಾಯಿಸಿತು. ಇದನ್ನು ಲೈಂಗಿಕ ಕಿರುಕುಳವೆಂದು ಪರಿಗಣಿಸಿ ಸರ್ವೋಚ್ಚ ನ್ಯಾಯಾಲಯದ ಮಾರ್ಗದರ್ಶಿಗನುಗುಣವಾಗಿ ಪರಿಹರಿಸಬೇಕೆಂದು ಕೇಳಲಾಯ್ತು. ಆದರೆ ಆಡಳಿತ ಮಂಡಳಿಯು ಲೈಂಗಿಕ ಕಿರುಕುಳದ ಘಟನೆ ನಡೆಯಿತೆಂಬುದನ್ನು ಒಪ್ಪಿಕೊಳ್ಳಲು ವಿರೋಧಿಸಿತು. ಅಲ್ಲದೆ ಮಹಿಳಾ ಗುಂಪೊಂದರ ಭಾಗವಹಿಸುವಿಕೆಯನ್ನು ಇಷ್ಟಪಡದೆ ಸಹೇಲಿಯ ಯೋಗ್ಯತೆಯನ್ನೆ ಪ್ರಶ್ನಿಸಿತು. ಆಡಳಿತ ಮಂಡಳಿ ಪ್ರಕಾರ ಅದು ಲೇಬರ್ ಕೇಸ್ ಆದ್ದರಿಂದ ಸಹೇಲಿಯವರಿಗೆ ಮಧ್ಯೆ ಪ್ರವೇಶಿಸುವ ಪ್ರಮೇಯವೇ ಇಲ್ಲವೆಂದು ಹೇಳಲಾಯ್ತು.

ಸಹೇಲಿ ಗುಂಪು- ಸರ್ವೋಚ್ಚ ನ್ಯಾಯಾಲದ ಮಾರ್ಗದರ್ಶಿಗಳನ್ನು ಉಲ್ಲಂಘಿಸಿರುವುದಕ್ಕಾಗಿ ನ್ಯಾಯಾಲಯ ನಿಂದನೆಯ ಮೊಕದ್ದಮೆ ಹೂಡುವ ಪ್ರಯತ್ನವನ್ನು ಮಾಡುವುದರ ಜೊತೆಗೆ ಆಡಳಿತ ಮಂಡಳಿಯವರೊಂದಿಗೆ ಮಾತುಕತೆ ನಡೆಸಿತು. ಅದೇ ಸಮಯದಲ್ಲಿ ಆರೋಪಿಯು ಸುಳ್ಳು ಆಪಾದನೆಗಳನ್ನು ನೀಡಿ ಸುಶೀಲಳ ಮೇಲೆ ಕೇಸ್ ಹಾಕಿರುವುದರ ಕುರಿತು ಕ್ರಮ ಕೈಗೊಳ್ಳಲು ಪ್ರಯತ್ನಿಸಲಾಯಿತು.

ಆಡಳಿತ ಮಂಡಳಿಯು ವಿಚಾರಣೆ ನಡೆಸಿತು. ಘಟನೆಯ ಪ್ರತ್ಯಕ್ಷ ಸಾಕ್ಷಿಗಳಾದ ಮೂರು ಜನ ಮಹಿಳಾ ಉದ್ಯೋಗಿಗಳು ಸುಶೀಲಳ ವಿರುದ್ಧ ಸಾಕ್ಷಿ ನೀಡಿದರು. ವಿಚಾರಣೆ ನಂತರ ಸುಶೀಲಳದು ದುರ್ವರ್ತನೆ ಎಂದು ಪರಿಗಣಿಸಿ ಆಕೆಯನ್ನು ೨.೪.೯೮ರಂದು ಕೆಲಸದಿಂದ ತೆಗೆದು ಹಾಕಿದರು.

ಮಾಗದರ್ಶಿಯಲ್ಲಿ ಸೂಚಿಸಿರುವಂತೆ ಆಡಳಿತ ಮಂಡಳಿಯು ದೂರು ಸಮಿತಿಯನ್ನು ರಚಿಸಿತು. ಸುಶೀಲಳನ್ನು ಕೆಲಸದಿಂದ ತೆಗೆದು ಹಾಕಿದ ದಿನವೇ ಸಮಿತಿಯನ್ನು ರಚಿಸಿದ್ದು ಆಶ್ಚರ್ಯ! ತರಾತುರಿತಯಲ್ಲಿ ಸಮಿತಿಯನ್ನು ರಚಿಸಿದ್ದು ಯಾಕೆಂದರೆ ಸುಶೀಲಳಿಗೆ ಸಹಾಯ ಮಾಡುತ್ತಿರುವ ಸರ್ವೋಚ್ಚ ನ್ಯಾಯಾಲಯದ ವಕೀಲರೊಬ್ಬರು ಸೂಚನಾ ಪತ್ರ ಕಳಿಸಿದ್ದಕ್ಕೆ. ಸೂಚನಾ ಪತ್ರದಲ್ಲಿ ಸರ್ವೋಚ್ಚ ನ್ಯಾಯಾಲಯದ ಮಾರ್ಗದರ್ಶಿಯಂತೆ ತಮ್ಮ ಜವಾಬ್ದಾರಿಯನ್ನು ನಿರ್ವಹಿಸದಿರುವುದು ನ್ಯಾಯಾಲಯದ ಉಲ್ಲಂಘನೆ ಯಾಗುತ್ತದೆ. ಕ್ರಮ ಜರುಗಿಸಲು ಕಾರಣವಾಗುತ್ತದೆ ಎಂದು ತಿಳಿಸಲಾಗಿತ್ತು.

"ಲೈಂಗಿಕ ಕಿರುಕುಳಕ್ಕೆ ಸಂಬಂಧಪಟ್ಟಂತೆ ಮಹಿಳೆ ದೂರು ಪತ್ರ ಸಲ್ಲಿಸಿದಾಗ ಆಕೆ ಮುಂದೆ ಕಿರುಕುಳಕ್ಕೆ ಒಳಗಾಗದಂತೆ ತಡೆದು ಕಾಪಾಡ ತಕ್ಕದ್ದು" ಎಂದು ಮಾರ್ಗದರ್ಶಿಯು ಸ್ಪಷ್ಟವಾಗಿ ತಿಳಿಸಿದೆ.

ಉದ್ಯೋಗಿಯನ್ನು ಕೆಲಸದಿಂದ ತೆಗೆದು ಹಾಕಿದ ಬಳಿಕ ಲೈಂಗಿಕ ಕಿರುಕುಳದ ದೂರನ್ನು ಕುರಿತು ವಿಚಾರಣೆ ನಡೆಸಿದ್ದು ವಿಡಂಬನೆ. ದೂರು ಸಮಿತಿಯನ್ನು ರಚಿಸಿದ ಆಡಳಿತ ಮಂಡಳಿಯು ಸುಶೀಲಳನ್ನು ವಿಚಾರಣೆಗೆ ಬರಬೇಕೆಂದು ಕರೆಯಿತು. ಸುಶೀಲ ದೂರು ಸಮಿತಿಗೆ ಪತ್ರ ಬರೆದು ಆಡಳಿತ ಮಂಡಳಿಯ ಕಾರ್ಯವಿಧಾನವು ಮಾಗದರ್ಶಿಗಳಿಗನು ಗುಣವಾಗಿಲ್ಲವೆಂದೂ, ಮಾರ್ಗದರ್ಶಿಯ ಪ್ರಕಾರ ದೂರು ಸಮಿತಿಯು ಸಂಸ್ಥೆಯ ಉದ್ಯೋಗಿಗಳಿಗೆ ಸಂಬಂಧಪಟ್ಟ ದೂರನ್ನು ಮಾತ್ರ ನೋಡಬೇಕಾಗುತ್ತದೆ ಎಂದೂ ತಿಳಿಸಿ ತನ್ನನ್ನು ಮತ್ತೆ ಕೆಲಸಕ್ಕೆ ತೆಗೆದುಕೊಳ್ಳಬೇಕೆಂದು ಮನವಿ ಮಾಡಿಕೊಂಡಳು. ಮತ್ತೆ ಕೆಲಸಕ್ಕೆ ತೆಗೆದುಕೊಂಡರೆ ದೂರು ಸಮಿತಿಯ ವಿಚಾರಣೆಗೆ ಖಂಡಿತವಾಗಿಯೂ ಬರುವೆನೆಂದೂ ಇತರೆ ಅಗತ್ಯಗಳನ್ನು ಪೂರೈಸುವುದಾಗಿಯೂ ತಿಳಿಸಿದಳು.

ಅವಳ ಯಾವ ಮನವಿಗೂ ಕಿವಿಗೊಡದೆ ಆಡಳಿತ ಮಂಡಲಿಯು ವಿಚಾರಣೆಯನ್ನು ಮುಂದುವರೆಸಿತು. ದೂರು ಸಮಿತಿ ರಚನೆ ಕಣ್ಣೊರೆಸುವ ತಂತ್ರವಾಗಿತ್ತಷ್ಟೇ. ಆ ಮೂಲಕ ಕಂಪೆನಿಯ ಹಿತಾಸಕ್ತಿಯನ್ನು ಕಾಪಾಡಿಕೊಂಡು ತಮ್ಮದು ನ್ಯಾಯಯುತ ಸಂಸ್ಥೆ ಎಂದು ಸಾರಿಕೊಳ್ಳುವುದಷ್ಟೇ ಆಡಳಿತ ಮಂಡಳಿಯು ಉದ್ದೇಶವಾಗಿತ್ತು. ಅಂತೆಯೇ ದೂರು ಸಮಿತಿಯು ಸುಶೀಲಳ ವಿರುದ್ಧ ಲೈಂಗಿಕ ಕಿರುಕುಳದ ಘಟನೆಯೇ ನಡೆದಿಲ್ಲವೆಂದು ತೀರ್ಮಾನಿಸಿದ್ದು ಆಶ್ಚರ್ಯವೇನೂ ಅಲ್ಲ.

"ಐಪಿಸಿ (ಭಾರತೀಯ ದಂಡ ಸಂಹಿತೆ) ಅಥವಾ ಇನ್ನಾವುದೇ ಕಾಯ್ದೆ ಅಡಿಯಲ್ಲಿ ಅಪರಾಧ ಎನಿಸುವಂತಹ ಲೈಂಗಿಕ ಕಿರುಕುಳವು ಗಮನಕ್ಕೆ ಬಂದಾಗ ಮಾಲೀಕನು ಸೂಕ್ತ ಅಧಿಕಾರಿಗೆ ದೂರು ನೀಡುವ ಕ್ರಮ ಕೈಗೊಳ್ಳಬೇಕು. ನಾಡಿನ ಕಾನೂನಿನ ಪ್ರಕಾರ ಐ.ಪಿ.ಸಿ.ಗನುಗುಣವಾಗಿ ಶಿಕ್ಷೆ ನೀಡುವುದು ಮಾಲೀಕನ ಕರ್ತವ್ಯ ಹಾಗು ಜವಾಬ್ದಾರಿ" ಎಂದು ಮಾರ್ಗದರ್ಶಿ ಹೇಳುತ್ತದೆ.

ಸುಶೀಲಳ ಘಟನೆಯಲ್ಲಿ ಆರೋಪಿ ನಡೆಸಿದ ಕೃತ್ಯ ಐಪಿಸಿಯ ೫೦೯ನೆ ಸೆಕ್ಷನ್ (ಮಹಿಳೆಯ ಗೌರವವನ್ನು ಅವಮಾನಿಸುವುದು) ಹಾಗೂ ಸೆಕ್ಷನ್ ೩೫೪ (ಮಹಿಳೆಯ ಗೌರವಕ್ಕೆ ಧಕ್ಕೆ ತರುವ ಹಲ್ಲೆ ಅಥವಾ ಬಲಪ್ರಯೋಗ) ವ್ಯಾಪ್ತಿಗೆ ಬರುವುದು ಸ್ಪಷ್ಟವಾಗಿದೆ.

ಕಂಪನಿಯ ಸೆಕ್ಯೂರಿಟಿಯವರು ಘಟನೆಗೆ ಸಂಬಂಧ ಪಟ್ಟಂತೆ ದಾಖಲೆಯೊಂದಕ್ಕೆ ಅದನ್ನು ಓದಲೂ ಅವಕಾಶ ಕೊಡದೆ ಸಹಿಹಾಕಲು ಸುಶೀಲಳನ್ನು ಒತ್ತಾಯಿಸಿದ್ದನ್ನು ಕುರಿತು ಆಕೆ ಲಿಖಿತ ದೂರನ್ನು ಪೊಲೀಸ್ ಠಾಣೆಗೆ ನೀಡಿದ್ದಳು. ಈ ದೂರನ್ನು ಸಹ FIR ಎಂದು ರಿಜಿಸ್ಟರ್ ಮಾಡಿಕೊಂಡಿಲ್ಲ.

ಆಡಳಿತ ಮಂಡಳಿಯ ವರ್ತನೆಯೂ ಸಹ ಐಪಿಸಿಯ ಸೆಕ್ಷನ್ ೫೦೪ (ಶಾಂತಿ ಕದಡುವುದಕ್ಕೆ ಎಡೆ ಮಾಡಿಕೊಡುವ ಉದ್ದೇಶದಿಂದ ಮಾಡಿದ ಅವಮಾನ) ಸೆಕ್ಷನ್ ೫೦೯ (ಮಹಿಳೆಯ ಗೌರವವನ್ನು ಅವಮಾನುಸುವುದು) ಸೆಕ್ಷನ್ ೫೦೯ (ಮಹಿಳೆಯ ಗೌರವವನ್ನು ಅಪಮಾನಿಸುವುದು)ರ ವ್ಯಾಪ್ತಿಗೆ ಬರುತ್ತದೆ. ಸುಶೀಲಳು ಕಂಪನಿಯು ವಿರುದ್ದ ಸರ್ವೋಚ್ಛ ನ್ಯಾಯಾಲಯದ ಮಾರ್ಗದರ್ಶಿಯನ್ನು ಉಲ್ಲಂಘಿಸುವ ಮೂಲಕ ನ್ಯಾಯಾಲಯವನ್ನು ನಿಂದಿಸಲಾಗಿದೆಯೆಂದು ದಾವೆ ಹೂಡಿದ್ದಾಳೆ.

ಘಟನೆಯು ಅನೇಕ ತಿರುವುಗಳನ್ನು ತೆಗೆದುಕೊಳ್ಳುತ್ತಿದ್ದಾಗ ಆರೋಪಿಯು ಸುಶೀಲಳ ವಿರುದ್ಧ ಸೆಕ್ಷನ್ ೪೯೯ (ಬೇಕಂತಲೆ ನಿಂದಿಸುವುದು) ಸೆಕ್ಷನ್ ೫೦೦ (ಮಾನನಷ್ಟ) ಸೆಕ್ಷನ್ ೫೦೧ (ಮಾನನಷ್ಟವಾಗುವ ಹೇಳಿಕೆಗಳನ್ನು ಮುದ್ರಿಸುವುದು) ಸೆಕ್ಷನ್ ೫೦೬ (ಬೆದರಿಸುವುದು)ರ ಅಡಿಯಲ್ಲಿ ದೂರು ನೀಡಿದ್ದಾನೆ. ಸುಶೀಲಳನ್ನು ಬಂಧಿಸುವ ವಾರೆಂಟನ್ನು ಸಹ ಜಾರಿ ಮಾಡಲಾಯ್ತು. ಜಾಮೀನು ಪಡೆಯಲು ಸುಶೀಲ ಬಹಳ ಓಡಾಡಬೇಕಾಯ್ತು. ಮೊಕದ್ದಮೆ ಈಗ ಸೆಶನ್ ಕೋರ್ಟಿನಲ್ಲಿದೆ.

ಅವಳ ಮೇಲಿನ ಆಪಾದನೆಗಳು ಸುಳ್ಳು ಹಾಗು ಅದಕ್ಕೆ ಯಾವುದೆ ಆಧಾರವಿಲ್ಲ, ಕೇವಲ ಆಕೆಯನ್ನು ತೊಂದರೆಗೆ ಸಿಕ್ಕಿಸಬೇಕೆಂಬ ಉದ್ದೇಶಿದಿಂದಲೆ ಆರೋಪ ಹೊರಿಸಲಾಗಿದೆ. ಈ ಆಪಾದನೆಗಳನ್ನು ಸುಳ್ಳೆಂದು ಸಾಬೀತು ಪಡಿಸಲು ಸುಶೀಲ ಉಚ್ಚನ್ಯಾಯಾಲಯದ ಮೊರೆಹೊಕ್ಕಿದ್ದಾಳೆ. ಸಹೇಲಿ ಗುಂಪಿನವರು ಪೋಲಿಸ್ ಅಧಿಕಾರಿಗಳನ್ನು, ಜಿಲ್ಲಾ ನ್ಯಾಯಾಧೀಶರನ್ನು, ನಗರ ನ್ಯಾಯಾಧೀಶರನ್ನು ಕಂಡು ಮಾತನಾಡಿದ ನಂತರವೂ ಎಫ್.ಐ.ಆರ್ (ಮೊದಲ ಮಾಹಿತಿ ಪತ್ರ)ಅನ್ನು ರಿಜಿಸ್ಟರ್ ಮಾಡಿಸಲು ಸಾಧ್ಯವಾಗಿಲ್ಲ.

ಜಿಲ್ಲಾ ಕಾರ್ಮಿಕ ಆಯುಕ್ತರ ಬಳಿಯಲ್ಲೂ ಸುಶೀಲ ದೂರು ಪತ್ರ ಸಲ್ಲಿಸಿದ್ದಾಳೆ. ಆ ಸಂದರ್ಭದಲ್ಲಿ ಸಹೇಲಿಯವರು ಸರ್ವೋಚ್ಚ ನ್ಯಾಯಾಲಯದ ಮಾರ್ಗದಶಿರ್ಯ ಬಗ್ಗೆ ಹೇಳಿದಾಗಲೂ ಸಹಾಯಕ ಕಾರ್ಮಿಕ ಆಯುಕ್ತರು ಲೆಕ್ಕಿಸಲಿಲ್ಲ. ಮತ್ತು ಮಾರ್ಗದರ್ಶಿಯು ತನಗೆ ಸಂಬಂಧಿಸಿದ್ದಲ್ಲವೆಂದು, ಲೈಂಗಿಕ ಕಿರುಕುಳದ ವಿಷಯಗಳು ತನ್ನ ವಿಚಾರಣೆಗೆ ಸಂಬಂಧಿಸಿದ್ದಲ್ಲವೆಂದು ಹೇಳಿದ್ದಾರೆ! ಸಹೇಲಿಯ ಪ್ರವೇಶದ ಮೊದಲು ಜಿಲ್ಲಾ ಕಾರ್ಮಿಕ ಆಯುಕ್ತರು ಕೇಸನ್ನು ಮುಕ್ತಾಯಗೊಳಿಸಲು ಸಿದ್ಧರಾಗಿದ್ದರು ಮತ್ತು ಸುಶೀಲಳನ್ನು ಕೆಲಸದಿಂದ ತೆಗೆದು ಹಾಕುವುದನ್ನೇ ಕಾಯುತ್ತಿದ್ದರು. ಕಾರಣವೇನೆಂದರೆ ತೆಗೆದು ಹಾಕಿದ ನಂತರ ಅದು ಸರಿಯಾದ ಕಾರ್ಮಿಕ ಕೇಸ್ ಆಗುತ್ತದೆ ಎಂದು! ಜಿಲ್ಲಾ ಕಾರ್ಮಿಕ ಆಯುಕ್ತರ ಕಛೇರಿ arbitrary body ಆದ್ದರಿಂದ ಯಾವುದನ್ನೂ ಜಾರಿಗೊಳಿಸುವ ಅಧಿಕಾರವಿಲ್ಲವೆಂದು ಹೇಳಲಾಯ್ತು. ಸಹೇಲಿಯವರ ಮಧ್ಯ ಪ್ರವೇಶಿಸುವಿಕೆಯಿಂದಾಗಿ ಆಯುಕ್ತರು ಮತ್ತೊಂದು ವಿಚಾರಣೆಯನ್ನು ನಡೆಸಿ, ವರದಿ ಸಲ್ಲಿಸಬೇಕಾಯ್ತು.

ಮೊದಲ ಬಾರಿಗೆ ಜಿಲ್ಲಾ ಕಾರ್ಮಿಕ ಆಯುಕ್ತರನ್ನು (ಮಹಿಳೆ) ಸಹೇಲಿಯವರು ಭೇಟಿ ಮಾಡಿದಾಗ ಸುಪ್ರೀಂ ಕೋರ್ಟಿನ ಮಾರ್ಗದರ್ಶಿಯನ್ನು ಕುರಿತು ಅವರು ಆಸಕ್ತಿ ತೋರಿಸಿ ಇದು ತಮಗೆ ತಿಳಿದಿರಲಿಲ್ಲವೆಂದು ಹೇಳಿದರು. ಇಂತಹ ಸರ್ಕಾರಿ ಸಂಸ್ಥೆಗಳ ಅಸೂಕ್ಷ್ಮತೆ ಎಲ್ಲರಿಗೂ ತಿಳಿದ ವಿಷಯವೇ! ಇಂತಹ ಕಾರ್ಮಿಕ ವಿರೋಧಿ ಸಂಸ್ಥೆಗಳಿಂದ ಮಹಿಳೆಯರಿಗೇನಾದರೂ ಸಹಾಯವಾದೀತೇ ಎಂಬುದು ಚರ್ಚಾಸ್ಪದ ವಿಷಯ. ಕಾರ್ಮಿಕರ ಮೊಕದ್ದಮೆಯನ್ನು ನಡೆಸುವ ವಕೀಲರುಗಳಿಗೆ ಸರ್ವೋಚ್ಚನ್ಯಾಯಾಲಯದ ಮಾರ್ಗದರ್ಶಿಯ ಅರಿವೇ ಇಲ್ಲ! ಸುಶೀಲಳ ಕೇಸಿನ ಸಂದರ್ಭದಲ್ಲಿ ಆಕೆಯ ವಕೀಲರಿಗೆ ಸಹೇಲಿಯವರು ಸಲಹೆ ಮಾಡಿದಾಗ್ಯು ಸಹ ಮಾರ್ಗದರ್ಶಿಯನ್ನು ಕಾರ್ಮಿಕ ಮೊಕದ್ದಮೆಯಲ್ಲಿ ಸೂಕ್ತವಾಗಿ ವ್ಯಾಖ್ಯಾನಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕಾರ್ಮಿಕ ನ್ಯಾಯಾಲಯದ ನ್ಯಾಯಾಧೀಶರುಗಳಿಗೂ ಸಹ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಬಗ್ಗೆ ತಿಳಿದಿರಲಿಲ್ಲ. ಮತ್ತು ಮಹಿಳಾ ದೃಷ್ಟಿಕೋನವನ್ನು ಅಂಗೀಕರಿಸಲು ತಯಾರಿರಲಿಲ್ಲ. ಇಂತಹ ಸಂದರ್ಭದಲ್ಲಿ ಮಹಿಳಾ ಗುಂಪುಗಳ ವಿವರಣೆಯ ತುರ್ತು ಅಗತ್ಯವಿದೆ.

ಸುಶೀಲಳ ಕಥೆ ಮುಂದುವರೆಯುತ್ತಲೆ ಇದೆ, ಹಾಗೆಯೇ ನ್ಯಾಯಾಕ್ಕಾಗಿ ಆಕೆ ನಡೆಸುತ್ತಿರುವ ಹೋರಾಟವೂ ಸಹ.

*ಸಹೇಲಿ - ಮಹಿಳಾ ಸಂಪನ್ಮೂಲ ಕೇಂದ್ರ, ದೆಹಲಿ*

# ಅಪಾಯಕಾರಿ ಗರ್ಭನಿರೋಧಕ ಕ್ವಿನ್‌ಕ್ರೈನ್ ಮೇಲಿನ ನಿಷೇಧ ಎಷ್ಟು ಪರಿಣಾಮಕಾರಿ?

**ಸಹೇಲಿ - ದೆಹಲಿ**

ದೇಶಾದ್ಯಂತ ಮಹಿಳಾ ಗುಂಪುಗಳು ಅಪಾಯಕಾರಿ ಗರ್ಭನಿರೋಧಕ ಕ್ವಿನ್‌ಕ್ರೈನ್ ಅನ್ನು ನಿಷೇಧಿಸಬೇಕೆಂದು (ಮಾನಸ-ಸೆಪ್ಟೆಂಬರ್ 1997ರ ಸಂಚಿಕೆಯಲ್ಲಿ ಕ್ವಿನ್‌ಕ್ರೈನ್ ಕುರಿತ ವಿವರವಾದ ಲೇಖನವಿದೆ) ನಡೆಸಿದ ಹೋರಾಟದ ಫಲವಾಗಿ ಸುಪ್ರೀಂಕೋರ್ಟ್ ದಿನಾಂಕ 16 ಮಾರ್ಚ್ 98ರಂದು ನಿಷೇಧ ಹೇರಿತು. ಕ್ವಿನ್‌ಕ್ರೈನ್ ಅನ್ನು ಮಹಿಳೆಯರ ಮೇಲೆ ರಾಸಾಯನಿಕ ಗರ್ಭನಿರೋಧಕವಾಗಿ ಉಪಯೋಗಿಸಲು ಆಮದು ಮಾಡಿಕೊಳ್ಳುವುದಾಗಲಿ, ಉತ್ಪಾದಿಸುವುದಾಗಲಿ, ವಿತರಿಸುವುದಾಗಲಿ ಮತ್ತು ಮಾರಾಟಮಾಡುವುದಾಗಲಿ ಕಾನೂನು ವಿರೋಧಿ ಎಂದು ತೀರ್ಪಿನಲ್ಲಿ ಹೇಳಲಾಗಿದೆ. ಆದರೆ ಈಗಾಗಲೆ ಸಾವಿರಾರು ಮಹಿಳೆಯರ ಮೇಲೆ ಅಪಾಯಕಾರಿ ಗರ್ಭ ನಿರೋಧಕವನ್ನು ಪ್ರಯೋಗಿಸಿರುವ ವೈದ್ಯರುಗಳ ಮೇಲೆ ಇನ್ನೂ ಯಾವ ಕ್ರಮವೂ ಜರುಗಿಲ್ಲ.

ಅಕ್ಕಿ ಕಾಳಿನ ಗಾತ್ರದ ಕ್ವಿನ್‌ಕ್ರೈನ್ ಗುಳಿಗೆಗಳನ್ನು ಮಹಿಳೆಯರ ಗರ್ಭಕೋಶದೊಳಗೆ ಸೇರಿಸಲಾಗುತ್ತದೆ. ಹೊರರೋಗಿಗಳ ತಪಾಸಣಾ ಕೇಂದ್ರಗಳಲ್ಲಿ, ಕಾಪರ್ 'ಟಿ' ಅಳವಡಿಸುವ ಸಾಧನದಿಂದಲೆ, ಕೆಲವೆ ನಿಮಿಷಗಳಲ್ಲಿ ಕ್ವಿನ್‌ಕ್ರೈನ್ ಅನ್ನು ಅಳವಡಿಸಿಬಿಡಲಾಗುತ್ತದೆ. ಇದು ಎಷ್ಟರಮಟ್ಟಿಗೆ ಕ್ಷೇಮ? ಆಗುವ ಅನಾಹುತವೇನು ಯಾವುದನ್ನೂ ಯೋಚಿಸದೆ ಅನೇಕ ವೈದ್ಯರುಗಳು ಇದನ್ನು ಮಹಿಳೆಯರ ಮೇಲೆ ಪ್ರಯೋಗಿಸಿದ್ದಾರೆ. ಇದೊಂದು ಅಪಾಯಕಾರಿ ಗರ್ಭ ನಿರೋಧಕವಾಗಿದ್ದು ಗರ್ಭನಾಳದಲ್ಲಿ ಭ್ರೂಣ ಬೆಳೆಯುವ ಸಾಧ್ಯತೆಗೆ, ಮಗುವಿನ ಬುದ್ಧಿಮಾಂದ್ಯತೆಗೆ ಕ್ಯಾನ್ಸರ್, ಇತ್ಯಾದಿ ತೊಂದರೆಗೆ ಕಾರಣವಾಗಬಹುದು. ಇದೊಂದು ಸರಳ ಹಾಗು ಖರ್ಚು ಇಲ್ಲದ ವಿಧಾನವೆಂದು ನಮ್ಮಂತಹ ಬಡದೇಶಗಳ ಮಹಿಳೆಯರ ಮೇಲೆ ಪ್ರಯೋಗಿಸಲಾಗುತ್ತಿದೆ. ಈ ವಿಧಾನವನ್ನು ಜನಸಂಖ್ಯೆಯ ಹೆಚ್ಚಳವನ್ನು ತಡೆಯುವ ಅಸ್ತ್ರವೆಂದು ನಂಬಿಸಲು ಹೊರಟಿದ್ದರು ಕುಟುಂಬ ನಿಯಂತ್ರಣದ 'ಹೊರೆ' ಹೊತ್ತ ಕೆಲ ಘನ ವೈದ್ಯರು!

ನಿಷೇಧವಿದ್ದರೂ ಸಹ ಅದರ ಉಪಯೋಗ ಸಂಪೂರ್ಣವಾಗಿ ನಿಂತಿದೆಯೇ? ಎಂಬುದು ಅನುಮಾನಾಸ್ಪದ. ಸಾವಿರಾರು ಮಹಿಳೆಯರ ಮೇಲೆ ಕ್ವಿನ್‌ಕ್ರೈನ್ ಪ್ರಯೋಗಿಸಿರುವವರಿಗೆ ಯಾವ ಶಿಕ್ಷೆಯೂ ಆಗಿಲ್ಲ. ಕರ್ನಾಟಕ, ಪ. ಬಂಗಾಳದ ರಾಜ್ಯಗಳಲ್ಲಿ ವೈದ್ಯರು, ಸರ್ಕಾರೇತರ ಸಂಸ್ಥೆಗಳು ಕ್ವಿನ್‌ಕ್ರೈನ್ ಪ್ರಯೋಗಿಸಿರುವುದು ತಿಳಿದ ವಿಷಯ. ಇನ್ನು ಇತರೆ ರಾಜ್ಯಗಳಲ್ಲಿಯೂ ಇದು ಮುಂದುವರೆದಿರುವ ಸಾಧ್ಯತೆಯಿದೆ. ಆ ಬಗ್ಗೆ ತಿಳಿದುಕೊಳ್ಳುವ ಅಗತ್ಯವಿದೆ.

ಯಾವ ವಿಷಯವೂ ಗೊತ್ತಿಲ್ಲದೆ ಅನೇಕ ಮಹಿಳೆಯರು ಕ್ವಿನ್‌ಕ್ರೈನ್‌ನ ಪ್ರಯೋಗಕ್ಕೆ ಬಲಿಯಾಗಿರಬಹುದು. ವೈದ್ಯರು, ದಾದಿಯರು, ಆರೋಗ್ಯ ಕಾರ್ಯಕರ್ತರು ಆಸ್ಪತ್ರೆಗಳಲ್ಲಿ ಈ ವಿಧಾನವನ್ನು ಸರಳ ಹಾಗೂ ಉಚಿತ ವಿಧಾನವೆಂದು ಹೇಳಿ ಪ್ರಯೋಗಿಸಬಹುದು. ಕಾಪರ್ 'ಟಿ' ಅಳವಡಿಸುವುದರ ಮತ್ತು ಕ್ವಿನ್‌ಕ್ರೈನ್ ಅಳವಡಿಸುವುದರ ವ್ಯತ್ಯಾಸವನ್ನು ಮಹಿಳೆಯರಿಗೆ ತಿಳಿಸದೆ ಇರಬಹುದು. ಆ ಬಗ್ಗೆ ಹೆಚ್ಚಿನ ಮಾಹಿತಿ ಪಡೆಯುವುದು ಸೂಕ್ತ. ಯಾರಿಗಾದರು ತಾವು ಕ್ವಿನ್‌ಕ್ರೈನ್ ಅಳವಡಿಕೆಗೆ ಒಳಗಾಗಿದ್ದೇವೆಂಬ ಅನುಮಾನವಿದ್ದಲ್ಲಿ ಈ ಕೆಳಗಿನ ಪ್ರಶ್ನೆಗಳನ್ನು ಉತ್ತರಿಸುವ ಮೂಲಕ ಅನುಮಾನ ಪರಿಹರಿಸಿಕೊಳ್ಳಬಹುದು.

ಈ ಕೆಳಗಿನ ಪ್ರಶ್ನೆಗಳಿಗೆ ನಿಮ್ಮ ಉತ್ತರ ಹೌದಾಗಿದ್ದರೆ ನೀವು ಟ್ಯೂಬೆಕ್ಟಮಿ ಅಥವಾ ಲ್ಯಾಪ್ರೊಸ್ಕೊಪಿಕ್ ಟ್ಯೂಬೆಕ್ಟಮಿ ಅಥವಾ ಆಪರೇಷನ್‌ಗೆ ಬದಲಾಗಿ ಕ್ವಿನ್‌ಕ್ರೈನ್ ವಿಧಾನಕ್ಕೆ ಒಳಗಾಗಿರಬಹುದು:

೧. ನೀವು ನರ್ಸ್ / ದಾಯಿ / ಡಾಕ್ಟರ್ / ಹೆಲ್ತ್‌ವರ್ಕರ್‌ಅನ್ನು ಕುಟುಂಬ ನಿಯಂತ್ರಣಕ್ಕೆಂದು ಟ್ಯೂಬೆಕ್ಟಮಿ ಅಥವಾ ಲ್ಯಾಪ್ರೊಸ್ಕೋಪಿಕ್ ಟ್ಯೂಬೆಕ್ಟಮಿ ಅಥವಾ ಆಪರೇಷನ್‌ಗಾಗಿ ಸಂಪರ್ಕಿಸಿದ್ದೀರಾ? ಹೌದು/ಇಲ್ಲ

೨. ಆಪರೇಷನ್ ಇಲ್ಲದೆ ಗರ್ಭನಿಯಂತ್ರಣ ಮಾಡಲಾಯಿತೆ? ಹೌದು/ಇಲ್ಲ

೩. ಅನಸ್ತೀಸಿಯೂ (ಅರಿವಳಿಕೆ ಮದ್ದು) ನೀಡದೆ ಗರ್ಭನಿಯಂತ್ರಣ ಮಾಡಲಾಯಿತೆ? ಹೌದು/ಇಲ್ಲ

೪. ಕಲೆ ಅಥವಾ ಕತ್ತರಿಸಿದ ಗುರುತು ಇಲ್ಲದೆಯೆ ಗರ್ಭ ನಿಯಂತ್ರಣ ಮಾಡಲಾಯಿತೆ? ಹೌದು/ಇಲ್ಲ

೫. ಹೊರರೋಗಿಗಳ ವಿಭಾಗದಲ್ಲೆ ಗರ್ಭ ನಿಯಂತ್ರಣ ಮಾಡಲಾಯಿತೆ? ಹೌದು/ಇಲ್ಲ

೬. ಯೋನಿಯೊಳಗೆ ಏನನ್ನಾದರು ಅಳವಡಿಸಲಾಯಿತೆ? ಪುನಃ ೬-೮ ವಾರಗಳ ನಂತರ ಏನನ್ನಾದರು ಅಳವಡಿಸಲಾಯಿತೆ? ಹೌದು/ಇಲ್ಲ

೭. ಅಳವಡಿಸಿದ ಕೂಡಲೆ ನೋವು ಮತ್ತು ಹಳದಿ ದ್ರವ ಬರಲು ಶುರುವಾಯಿತೆ? ಹೌದು/ಇಲ್ಲ

೮. ಈ ಚಿಕಿತ್ಸೆಯನ್ನು ಉಚಿತವಾಗಿ ನೀಡಲಾಯಿತೆ? ಹೌದು/ಇಲ್ಲ

ಈ ಕೆಳಗಿನ ಪ್ರಶ್ನೆಗಳಿಗೆ ನಿಮ್ಮ ಉತ್ತರ 'ಇಲ್ಲ'ವಾಗಿದ್ದರೆ ನೀವು ಕಾಪರ್ 'ಟಿ' ಅಳವಡಿಕೆಗೆ ಬದಲಾಗಿ ಕ್ವಿನ್‌ಕ್ರೈನ್ ಪ್ರಯೋಗಕ್ಕೆ ಒಳಗಾಗಿರಬಹುದು.

೧. ನೀವು ನರ್ಸ್/ ಮಿಡ್‌ವೈಫ್ / ಡಾಕ್ಟರ್ ಅನ್ನು ಕುಟುಂಬ ನಿಯಂತ್ರಣಕ್ಕೆಂದು ಟ್ಯೂಬೆಕ್ಟಮಿ ಅಥವಾ ಲ್ಯಾಪ್ರೋಸ್ಕೋಪಿಕ್ ಟ್ಯೂಬೆಕ್ಟಮಿ ಅಥವಾ ಆಪರೇಷನ್‌ಗಾಗಿ ಸಂಪರ್ಕಿಸಿದ್ದಿರಾ? ಹೌದು/ಇಲ್ಲ

೨. ನಿಮಗೆ ಕಾಪರ್'ಟಿ' ಮತ್ತು ಅದರ ಅಳವಡಿಕೆಯ ಸಾಧನವನ್ನು ತೋರಿಸಲಾಯಿತೆ? ಹೌದು/ಇಲ್ಲ

೩. ಬೆರಳಿನಲ್ಲಿ ಮುಟ್ಟಿ ನೋಡಿಕೊಂಡಾಗ ನೈಲಾನ್ ದಾರಗಳಿರುವುದು ಗಮನಕ್ಕೆ ಬಂದಿದೆಯೆ? ಹೌದು/ಇಲ್ಲ

೪. ೩-೫ ವರ್ಷಗಳ ನಂತರ ಕಾಪರ್'ಟಿ'ಯನ್ನು ಬದಲಾಯಿಸಲು ಬರಬೇಕೆಂದು ನಿಮಗೆ ಹೇಳಲಾಯ್ತು? ಹೌದು/ಇಲ್ಲ

೫. ಹೊಸ ಗರ್ಭ ನಿರೋಧಕದ ಬಗ್ಗೆ ನಿಮಗೆ ಹೇಳಲಾಯಿತೇ? ಹೌದು/ಇಲ್ಲ

೬. ಈ ವಿಧಾನವನ್ನು ಖಾಸಗಿ ಆಸ್ಪತ್ರೆಯಲ್ಲಿ ಮಾಡಿದಾಗಲೂ ಹಣ ಕೇಳಲಾಯ್ತು? ಹೌದು/ಇಲ್ಲ

ಹೆಚ್ಚಿನ ಮಾಹಿತಿ ಪಡೆಯಲು ದಯವಿಟ್ಟು ಸ್ನೇಹಿತರೊಂದಿಗೆ, ನೆರೆಹೊರೆಯವರೊಂದಿಗೆ ಮಾತನಾಡಿ. ಗೊತ್ತಿಲ್ಲದೆ ನಿಮ್ಮ ಸ್ನೇಹಿತರು ಈ ವಿಧಾನಕ್ಕೆ ಒಳಗಾಗಿರಬಹುದು. ನಿಮ್ಮ ಅನುಮಾನವನ್ನು ಸಾಬೀತು ಪಡಿಸಿಕೊಳ್ಳಲು ಈ ವಿಧಾನವನ್ನು ನಿಮಗೆ ಅಳವಡಿಸಿದ ನರ್ಸ್, ಮಿಡ್‌ವೈಫ್, ಅಥವಾ ವೈದ್ಯರನ್ನು ಸಂಪರ್ಕಿಸಿ. ಪ್ರತಿ ರಾಜ್ಯದ ರಾಜಧಾನಿಗಳಲ್ಲಿರುವ ಡ್ರಗ್ ಕಂಟ್ರೋಲರ್ ಕಛೇರಿಗೆ ಕ್ವಿನ್‌ಕ್ರೈನ್ ಉಪಯೋಗವು ಕಾನೂನು ವಿರೋಧಿ ಎಂಬ ಮಾಹಿತಿ ನೀಡಬೇಕು. **ಈ ವಿಧಾನವನ್ನು ಪ್ರಯೋಗಿಸುವ ವ್ಯಕ್ತಿಗಳು ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿರುವುದರಿಂದ, ಕಾನೂನಿನ ಪ್ರಕಾರ ಶಿಕ್ಷಾರ್ಹರು. ತಮಗೆ ತಿಳಿದ ವಿವರಗಳನ್ನು ನಮಗೆ ತಿಳಿಸಿ ನಾವು ದೆಹಲಿಯಲ್ಲಿರುವ ಡ್ರಗ್ ಕಂಟ್ರೋಲರ್ ಜನರಲ್ ಅವರ ಗಮನಕ್ಕೆ ತರುವೆವು.**

**ಭಾರತದಲ್ಲಿ ಸುರಕ್ಷಿತ, ಪರಿಣಾಮಕಾರಿ ಗರ್ಭ ನಿರೋಧಕ ವಿಧಾನಗಳು ಲಭ್ಯವಿವೆ ಹಾಗೂ ಅವು ಉಚಿತವಾಗಿಯೂ ದೊರೆಯುತ್ತವೆ.**

**ನೀವು, ನಿಮ್ಮ ಸ್ನೇಹಿತರು, ನೆರೆಹೊರೆಯವರು ಈ ಕಾನೂನು ಬಾಹಿರ ಗರ್ಭ ನಿರೋಧಕ ವಿಧಾನಕ್ಕೆ ಬಲಿಯಾಗುವುದನ್ನು ತಡೆಯಿರಿ.**


ಸಂಪರ್ಕ ವಿಳಾಸ

SAHELI - Women's Resource Centre
Above Shop Nos. 105-108
Defence Colony Flyover Market
New Delhi - 110024

# ಸಮಸ್ಯೆಗಳಿಗೆಷ್ಟು ಮುಖ?

'ಸಮಸ್ಯೆಗಳು ಒಂದೇ ತೆರನವಲ್ಲ. ಒಂದು ಸಮಸ್ಯೆಗೆ ಹಲವು ಮುಖಗಳಿರುತ್ತವೆ' ಎಂಬ ಮಾತೊಂದಿದೆ. ಅಂಥ ಸ್ಪಷ್ಟ ಚಿತ್ರಗಳು ಈಚೆಗೆ ನಡೆದ ಎರಡು ಪ್ರಕರಣಗಳಿಂದ ಸಿಕ್ಕಿವೆ.

**ಒಂದು :**

ಅದೊಂದು ಮಧ್ಯಮ ವರ್ಗದ ಸಂಪ್ರದಾಯಸ್ಥ ಕುಟುಂಬ. ಗಂಡ-ಹೆಂಡತಿ, ಎರಡು ಮಕ್ಕಳು (ಗಂಡು-ಹೆಣ್ಣು). ಹೆಣ್ಣು ಮಗುವಿಗೆ ಹದಿನಾರು ವಯಸ್ಸಿನ ಹೊತ್ತಿಗೇ ಮದುವೆ ಮಾಡುವ ಯೋಚನೆ. ಚಂದವಾದ ಹುಡುಗನೂ ಸಿಕ್ಕ. ಚೆಲುವ, ಒಳ್ಳೆಯ ಕೆಲಸದಲ್ಲೂ ಇದ್ದ. ಇನ್ನೇನು ಬೇಕು? ಪ್ರಾಯ ಚಿಕ್ಕದಾದರೇನು, ಜೋಡಿ ಮುದ್ದಾಗಿದೆ. ವರನ ಕಡೆಯವರು ಚಿಕ್ಕ-ಪುಟ್ಟ ವಿಚಾರಗಳಿಗೂ ತಕರಾರು ಮಾಡುತ್ತಿದ್ದರೂ 'ಅದೇನು ದೊಡ್ಡದು ಬಿಡು' ಎನ್ನುತ್ತ ಸಹಿಸಿದರು. ಅಷ್ಟೋ-ಇಷ್ಟೋ ಕೊಟ್ಟರು. ಖರ್ಚಿಗಾಗಿ ಜೀವಮಾನವಿಡೀ ಮಾಡಿದ್ದ ಉಳಿತಾಯದಲ್ಲಿ ಕಟ್ಟಿಸಿದ್ದ ಮನೆಯೊಂದನ್ನು-ಅದರ ಸಾಲ ಇನ್ನೂ ತೀರುವ ಮೊದಲೇ - ಮಾರಿ 'ಭರ್ಜರಿ ಮದುವೆ ಮಾಡಿದಿರಿ' ಎಂದು ಬಂದವರು ಹೊಗಳುವ ಹಾಗೆ ಮದುವೆ ಮಾಡಿದರು.

ಮೊದಲಿನಿಂದಲೂ ಏನೋ ಇರಿಸು-ಮುರಿಸು. ಹುಡುಗಿ ಚಿಕ್ಕವಳಾದರೂ ಮಾತಿನ ಮಲ್ಲಿ. ಆಡುವ ಮಾತೆಲ್ಲ ಲಾ ಪಾಯಿಂಟೇ.... ಆದರೆ ಎದುರಿನವರು ಜೋರಾದರೆ ಲಾ ಪಾಯಿಂಟ್ ಎಲ್ಲ ಗಂಟಲಲ್ಲೇ ನಿಂತು ಗಪ್ ಚಿಪ್ಪಾಗುತ್ತಿದ್ದಳಾಕೆ.

ಅಮ್ಮನ ಮನೆಗೆ ಬಂದಾಗ ಒಂದಿಷ್ಟು ಸಣ್ಣ ಪುಟ್ಟ ವಿಚಾರ ಹೇಳಿ 'ಅವೆಲ್ಲ ಸಾಮಾನ್ಯವಾದ ಸಂಗತಿಗಳು ಹೊಂದಿಕೊ ಬೇಕು' ಅನ್ನಿಸಿಕೊಂಡು ಹೋದರೆ, 'ಮಾತೆತ್ತಿದರೆ ತಾಯಿ ಮನೆಗೆ ಹೋಗ್ತೀಯಾ, ಮನೆಯಲ್ಲಿದ್ದಾಗ ಪಾತ್ರೆ-ಪಡಗ ನಂದು-ನಮ್ಮಮ್ಮಂದು ಅಂತ ಲೆಕ್ಕ ಇಡ್ತೀಯಾ' ಎಂದು ಸ್ಟಾಟೆ ತಿವಿಸಿಕೊಂಡು ತೆಪ್ಪಗಾಗುತ್ತಿತ್ತು ಹುಡುಗಿ.

ಕೆಲವು ಸಂಗತಿಗಳು ಯಾರ ಅಪ್ಪಣೆಗೂ ಕಾಯುವುದಿಲ್ಲ. ಹಾಗೇ ಆಕೆ ಗರ್ಭ ಧರಿಸಿದಳು. ಪುಟ್ಟ ಮಗುವಿನ ತಾಯಿಯಾದಾಗ ಅವಳಿಗೆ ಇನ್ನೂ ಹದಿನೆಂಟಾಗಿರಲಿಲ್ಲ.

ಇಷ್ಟು ಹೊತ್ತಿಗೆ ಅವಳಿಗೆ ಅರ್ಥವಾಗತೊಡಗಿತ್ತು. ಗಂಡ ಸಂಬಳಗಾರ. ಆದರೆ ಏನಾಗುತ್ತೋ ಮನೆಗೆ ಕಾಸು ಕೊಡ. ಮೈದುನ-ಮಾವ ತಂದು ಹಾಕಿದ್ದನ್ನು ತಿನ್ನುವಾಗ ಹಂಗಿಸುವ ಮಾತಿಗೆ ಮೌನವೇ ಉತ್ತರವಾಗುತ್ತಿತ್ತು. ಹೆಚ್ಚಿನದ್ದೇನು ಬೇಕಾದರೂ ಅಪ್ಪನನ್ನು ಕೇಳಿ ಪಡೆಯುವುದು. ಅಷ್ಟಕ್ಕೇ ಸುಮ್ಮನಾದೀತೇ ಎಲ್ಲ... ಕ್ರಮೇಣ ಮಾತಿನ ಜೊತೆಗೆ ಕೈಗಳು ಮೇಲೆದ್ದವು. ಮಾವ, ಮೈದುನರ ಜೊತೆ ಅತ್ತೆ, ಆಕೆಯ ಮದುವೆಯಾದ ಮನೆಯ ಹೆಣ್ಣು ಮಕ್ಕಳೂ ಸೇರಿದರು. ಹೀಗೆ ಎಲ್ಲರ ಮಾತಿನ ಪ್ರಹಾರ, ಮೂತಿ ತಿವಿತಗಳು, ಮನೆಗೆ ಬರುವ ಹೊತ್ತಿಗೆ ಅವಳ ಗಂಡನೆದುರು ದೂರುಗಳ ಪಟ್ಟಿ.....

'ಇಷ್ಟೆಲ್ಲ ಆಗೋಕೆ ನೀನೇ ಕಾರಣ, ಬಾಯಿ ಮುಚ್ಚಿಕೊಂಡು ಬಿದ್ದಿರಬಾರದೆ' ಎನ್ನುತ್ತಾ ಸಿಕ್ಕಿದ್ದನ್ನೆತ್ತಿ ಬಡಿಯುವ ಗಂಡ.

ಆಗ-ಈಗ ಏಕಾಂತದಲ್ಲಿದ್ದಾಗ 'ನನ್ನ ಅಮ್ಮ ಒಳ್ಳೆಯವಳಲ್ಲ. ಅವಳೆದುರು ನಿನ್ನನ್ನು ಬೈದರೆ, ಬಡಿದರೆ ಸಹಿಸಿಕೊ' ಎಂಬ ಕಿವಿಮಾತು. ಇವೆಲ್ಲ ಕಡೆಗೆ ಪೊರಕೆ, ಚಪ್ಪಲಿ, ಚಾಕು, ಸೀಮೆಎಣ್ಣೆಗಳ ಹಂತಕ್ಕೂ ತಲುಪಿದಾಗ ತಾಯಿ-ತಂದೆ ಬಂದು ಮಗಳ ಪರ ವಾದಿಸಿ 'ಬೇರೆ ಮನೆ ಮಾಡಿದರೆ ಕಳಿಸ್ತೇವೆ' ಅಂತ ಕರೆದೊಯ್ದರು.

ತನ್ನ ಅಮ್ಮನಿಗೆ 'ಹಾಗೂ ಹೀಗೂ ಮಾಡಿ, ಮತ್ತೆ ನಿನ್ನ ಹತ್ತಿರವೇ ಬರೊ ಹಾಗೆ ಮಾಡ್ತೀನಿ' ಅಂತ ಪಿಸುಗುಟ್ಟಿಬಂದ ಈ ಗಂಡನೆಂಬ ಪ್ರಾಣಿ ಬೇರೆ ಮನೆ ಮಾಡಿತು. ಮನೆಗೆ ಸಾಮಾನು ತರೋಲ್ಲ, ಸಮಯಕ್ಕೆ ಬರೋಲ್ಲ, ಹ್ಯಾಗೆ ತೂಗಿಸೋದು? ಯಾರಿಗೆ ಹೇಳೋದು? ಬಯಸಿ, ಬಯಸಿ ಕನಸು ಕಾಣುತ್ತ ಮಾಡಿದ್ದ ಬೇರೆ ಮನೆಯಾಗಿತ್ತದು... ಹುಡುಗಿ ಏನು ನಾಜೋಕು ಮಾಡಿದರೂ ಒಪ್ಪೊತ್ತಿನ ಉಪವಾಸ 2-3 ದಿನದ ಉಪವಾಸದವರೆಗೆ ಬಂತು. 'ಇದೆಲ್ಲ ಆಗೊಲ್ಲ ನಡೀ ಮನೆಗೆ' ಅಂತ ಮತ್ತೆ ತನ್ನ ಅಮ್ಮನ ಉಡಿ ಬೆಂಕಿಗೇ ಹೆಂಡತೀನ ತಂದು ಹಾಕಿದ ಆ ಗಂಡ. ಈಗ ಇನ್ನಷ್ಟು ಹೀಯಾಳಿಕೆ - 'ಬೇರೆ ಮನೆ ಮಾಡ್ತೀಯೇನೆ?' ಏನು ಹೇಳಬಹುದು ಆ ಮುಗ್ಧೆ!

ಗಂಡ ಸಾಲಗಾರ - ಯಾಕೆ ಮಾಡಿದ ಸಾಲ ತಿಳೀದು. ಮನೆಗೆ ತರಲಿಲ್ಲ. ಎಲ್ಲರ ಹಿಡಿತ-ಮಾತಿನಲ್ಲಿ ನಲುಗಿದ ಹುಡುಗಿಗೆ ಗಂಡ ಕುಡೀತಾನೆ ಅಂದರು ಯಾರೊ..... ಅವಳಿಗೆ ತಿಳಿಯಿತಲ್ಲಾ. ಇನ್ನೇನು ಅಂತ ಅವನು ಕುಡಿದೇ ಮನೆಗೆ ಬಂದ - ಬಡಿದ.

ಮತ್ತೆ ತಾಯಿ ಮನೆಗೆ - ನನಗೇನು ಹೀಗೆ ಅಲ್ಲಿಂದಿಲ್ಲಿಗೆ ಏನೊ ಸುಟ್ಟ ಬೆಕ್ಕಿನ ಹಾಗೆ ಅಲೆಯುವ ಪಡಿಪಾಟಲು ಅನ್ನಿಸಿತು. ಬೇಸತ್ತಾಗ ಅಮ್ಮನೋ, ನೆರೆಯವರೋ ಒಂದೆರಡು ಮಾತೂ ಅಂದಿರಬಹುದು, ಸಂಕಟಪಟ್ಟಿತು ಹುಡುಗಿ.

ಮತ್ತೆ ಬಂದ ಗಂಡ. 'ಇನ್ನೇನೂ ತೊಂದರೆ ಆಗೋಲ್ಲ. ಚೆನ್ನಾಗಿ ನೋಡಿಕೋತೀನಿ ಬಾ' ಅಂದ. ಅಪ್ಪ ಬೇಡ ಮಗೂ ಎಂದರೂ ಕೇಳದೆ 'ಇರಲಿ, ಇದೊಂದು ಅವಕಾಶ ಕೊಡಿ ಅಪ್ಪಾ, ಹೋಗಿ ಬರ್ತೀನಿ' ಅಂದು ಹೋದ ಹುಡುಗಿ ಮತ್ತೆ ಮೈ-ಮುಖ ಗಾಯ ಮಾಡಿಕೊಂಡೇ ಅಳುತ್ತ ಬಂದಳು.

ಹುಡುಗ ಯಾಕೆ ಹೀಗೆ ಮಾಡ್ತಾನೆ? ಹೆಂಡತಿ ಕಂಡರೆ ಪ್ರೀತಿ ಇಲ್ಲವೆ? ಏನೊ ಒಮ್ಮೆ ಪ್ರೀತಿ ಇದ್ದಂತೆ, ಇನ್ನಾವಾಗಲೊ ಅತಿ ಸಿಟ್ಟು. ಯಾಕೆ ಈ ದ್ವಂದ್ವ?

ತಂದೆ ದೂರು ಕೊಟ್ಟರು - ಕೌನ್ಸಲಿಂಗ್ ಅಂದರು..... ಸ್ನೇಹಿತರ ಮೂಲಕ ಹೇಳಿಸಿದರು.... ಒಂದಕ್ಕೂ ಜಗ್ಗಲಿಲ್ಲ. ಮತ್ತೊಂದೋ ಬಂದು ಕರೆದೊಯ್ದು ದೋಸೆ ಕೊಡಿಸಿದ. ಮಗುವಿಗೆ ಬಟ್ಟೆ, ಆಟದ ಸಾಮಾನು ಕೊಡಿಸಿದ. ಹುಡುಗಿ ಕರಗಿತು - ಅವನ ಹಿಂದೆಯೇ ಹೋಯಿತು.

ಈಗ 'ನಿನಗೆ ನಾಚಿಕೆ ಇಲ್ಲ ಬಂದಿದೀ. ತಂದು ಹಾಕೋರಿಲ್ಲ. ನಮ್ಮ ದುಡಿಮೆ ಮೇಲೆ ತಿಂತಿದೀರಿ. ನನಗೂ ಹೊಂದಿಕೊ, ನಿನ್ನ ಚೆನ್ನಾಗಿಟ್ಟುಕೋತೀನಿ' ಅಂದ ಮೈದುನ.

ನಿನ್ನ ಹೆಂಡತಿ ಅವನ ಜೊತೆ ಮಾತಾಡಿದಳು, ಇವರ ಜೊತೆ ನಿಂತಿದ್ದಳು ಎಂತ ಒಂದಿಲ್ಲೊಂದು ದೂರುಗಳು-ಮಿಗಿಲಾಗಿ ಆ ಗಂಡನಿಗೂ ಅದೇ ಬೇಕಿತ್ತು.

'ನಿನಗೆಷ್ಟು ಜನ ಗಂಡರುಗಳೇ ಚಿನಾಲಿ?' ಅಂತ ಒದ್ದ. ಒಮ್ಮೆ ಯಾರೊ ಸ್ನೇಹಿತನ ಕೈಲಿ ತಾನೇ ಸಿಹಿ ಕೊಟ್ಟು ಕಳುಹಿಸಿದ, ಬಂಥನೇ 'ಅವನಿಗೂ ನಿನಗೂ ಏನು ಸಂಬಂಧ? ನಿಂಗೆ ಡೈವೊರ್ಸ್ -ಮಾಡ್ತೀನಿ' ಅಂತ ಸಾಯುವ ಹಾಗೆ ಬಡಿದ. ನೋಡಿಯೂ ನೋಡದ ಹಾಗೆ ಮುಸಿ ನಕ್ಕರು ಮನೆ ಮಂದಿ.

ಮತ್ತೆ ಅಪ್ಪನಿಗೆ ಹೇಳಿದಳು, ಅಮ್ಮನ ಮನೆಗೆ ಬಂದಳು... ಮೈಯೆಲ್ಲ ನೀಲಿಗಟ್ಟಿದ ಗಾಯ, ಬರೆ. 'ಏನು ಹಿಂಸೆ ತಾಯಿ, ಇನ್ನು ಆ ಮನೆಗೆ ಕಾಲಿಡಬೇಡ. ಗಂಡನೇ ಇಲ್ಲ ಅಂದುಕೊ. ಓದು, ಕೆಲಸಕ್ಕೆ ಸೇರಿಕೊ. ಆ ಪುಟ್ಟ ಮಗನ ಭವಿಷ್ಯ ನೋಡು' ಅಂತ ಮನೆಯವರು ತಿಳಿ ಹೇಳಿದರು. ಪೊಲೀಸ್ ಕಂಪ್ಲೈಂಟ್ ಕೊಟ್ಟರು. ಎಲ್ಲ ಬಂದೋಬಸ್ತು ಮಾಡಿದರು.

'ನನ್ನ ಗಂಡ ಕೆಟ್ಟವನಲ್ಲ. ಅವರೆಲ್ಲ ಬೈದರೆ ಬೈಸಿಕೊ, ಉತ್ತರ ಕೊಡಬೇಡ ಅಂತಾರೆ. ಅವರ ಬೈಗಳು ತಾಳಿಕೊಳ್ಳಕ್ಕಾಗದಂಥವು. ಮೀರಿ ಒಂದು ಮಾತಾಡಿದರೆ ಇಂಥ ರಂಪವಾಗುತ್ತೆ' ಅಂತ ತನ್ನ ಹೆಂಡತಿಯನ್ನೇ ನಂಬದ, ಸುಖವಾಗಿಡಲಾಗದ-ಕ್ಷಣಕ್ಕೊಂದು ಮಾತಾಡುವ, ಎರಡು ವ್ಯಕ್ತಿತ್ವ ಉಳ್ಳ, ತಿಕ್ಕಲು ಹುಡುಗ ಅಥವಾ ಮನೋರೋಗಿಯಾದ ವ್ಯಕ್ತಿಯ ಬಗ್ಗೆ ಆ ಹುಡುಗಿಗೆ ಇನ್ನೂ ಏನೋ ಪ್ರೀತಿ, ನಿರೀಕ್ಷೆ, ಭರವಸೆ.... ಏನನ್ನಬೇಕು ಇದಕ್ಕೆ?

ಮತ್ತೆ ಅವರು ಕರೆದಲ್ಲಿಗೆ ಹೋದರೆ ನೀನು ಜೀವಂತ ಹೊರಬರಲಾರೆ, ಮಗುವಿಗೆ ತಾಯಿ ಆಗಿ ಇಲ್ಲಿರು. ನೀನೇ ಇಲ್ಲವಾದರೆ ಬದುಕಿಗೇನಿದೆ ಅರ್ಥ ಅನ್ನುವ ತಿಳಿವಳಿಕೆ ಮಾತಿಗೆ ತಲೆ ಹಾಕಿದಳು. ನಾಲ್ಕು ದಿನ ಕಳೆದ ಮೇಲೆ ಬರುವ ಗಂಡ, ಒಮ್ಮೆ ನಕ್ಕು-ಮತ್ತೊಮ್ಮೆ ಸಿಡುಕಿ 'ನಡೀ ಮನೆಗೆ' ಅನ್ನುವ ಅವನೆದುರು ಅವಳು ಕರಗುತ್ತಾಳೆ.

ಇವೆಲ್ಲದರ ನಡುವೆ ಪಿಳಿ ಪಿಳಿ ಕಣ್ಣು ಬಿಡುತ್ತ 'ಅಪ್ಪ-ಅಮ್ಮ ನಾನು ಶಾಲೆಗೆ ಹೋಗ್ತೀನಿ' ಅಂತ ಚೀಲ ಹೆಗಲಿಗೆ ಹಾಕಿಕೊಂಡು ಟಾಟಾ ಹೇಳುವ ಮಗು.... ನಾಳೆಗಳಲ್ಲಿ ಆಕೆಗೇನು ಕಾದಿದೆಯೊ? ಇಲ್ಲಿ ಚಿಕ್ಕ ಹುಡುಗಿಗೇ ಮದುವೆ ಮಾಡಿ ತಲೆತೊಳೆದುಕೊಂಡೆವೆಂದುಕೊಂಡ ಹೆತ್ತವರ ತಪ್ಪೂ ಮುಖ್ಯವಾಗುತ್ತದೆ. ಹಾಗೇ ವಿಷಾದ ಕೂಡ.

ಎರಡು :

ಆಕೆ ಅಪ್ರತಿಮ ಪ್ರತಿಭಾವಂತೆ. ಪುಟ್ಟ ಮಗುವಿದ್ದಾಗಿಂದ ಎಲ್ಲರ ಕೈಯಲ್ಲೂ ಪ್ರೀತಿಯಿಂದ ಆಡಿದ ಕೂಸು. ದೊಡ್ಡವಳಾದಂತೆ ತನ್ನ ಅಪ್ಪನ ಕ್ರೌರ್ಯ ಸಹಿಸಲಾಗದೆ ಹೊರಗುಳಿದ ತಾಯಿಯ ಬಗ್ಗೆ ಏನೇನೋ ಪ್ರಶ್ನೆಗಳು. ಪ್ರೀತಿಯಿಂದ ಕರೆದೊಯ್ದು ಕೆಟ್ಟದ್ದನ್ನು ತಲೆಗೆ ತುಂಬಿಸಿದ್ದ ಆ ಅಪ್ಪ ಕೂಡಾ.

ತಾಯಿಯನ್ನೇ ದ್ವೇಷಿಸಿತು ಹುಡುಗಿ. ತನ್ನ ಪಾಡಿಗೆ ತಾನು ಎಂದಿತು. ಯಾರ ಅಂಕೆ-ಆಜ್ಞೆಗೆ ಮಣಿಯದೆ, ಈ ಕ್ಷಣದ ಸಂತೋಷಕ್ಕೆ ಏನು ಬೇಕಾದರೂ ಮಾಡಲು ಸಿದ್ಧವಾದಳು; ಮಾಡಿದಳು. ಚೆಲುವಿದೆ, ಯೌವನವಿದೆ, ಸ್ವಚ್ಛಂದವಿದೆ, ಮುತ್ತಿದ ದುಂಬಿಗಳೆಷ್ಟೋ. ಹುಡುಗಿ ಎಲ್ಲ ಚಟ ಕಲಿತಳು. ಕುಡಿದು, ತೂರಾಡುತ್ತಾ ಮನೆಗೆ ಬಂದು 'ಕಾಸು ಕೊಡು' ಅಂತ ಅಮ್ಮನ್ನ

ಬೆದರಿಸಿ ಕೊಂಡುಹೋದ ಹಣವೆಲ್ಲ ಅವಳ-ಅವಳ ಗೆಣೆಕಾರರ ದುಶ್ಚಟಗಳಿಗೇ ಸಾಲದು.

ಹುಡುಗಿ ತನ್ನ ಸುತ್ತಲೇ ಎಲ್ಲರೂ ಎಲ್ಲವೂ ಪರಿಭ್ರಮಿಸಬೇಕು ಅಂದುಕೊಂಡಳು. ಎಲ್ಲರ ಪ್ರೀತಿ-ಸುಖ ತನಗೇ ಇರಲಿ ಅಂದಳು. ಅದಕ್ಕಾಗಿ ಸುಖವಾಗಿರುವ ಜೋಡಿಗಳನ್ನು ಮುರಿದಳು. ಅವರಿವರೆದುರು ಕರಗುವಂಥ ಕಥೆ ಹೇಳಿದಳು - ಅವಳ ಕಥೆ ಕೇಳಿ ಪೊಲೀಸರು ಕೆಲವರನ್ನು ಜೈಲಿಗೂ ಹಾಕಿದರು. ಹಾಗೆ ಮಾನವಂತರನ್ನು ಬೀದಿಗೆಳೆದು, ನಲಿವ ಜೋಡಿಗಳನ್ನು ಬೇರೆ ಮಾಡಿ, ಕಂಡ ಕಂಡವರನ್ನು 'ನಲ್ಲ ಬಾ' ಎನ್ನುತ್ತಾ, ಬಂದವರನ್ನು ಥಟ್ಟನೆ ದೂರ ಮಾಡುತ್ತಾ, ಅಗತ್ಯವಾದಾಗ ದುಡ್ಡಿಗಾಗಿ ಸುಳ್ಳು-ವಂಚನೆ-ಕಳ್ಳತನದಂಥದಕ್ಕೂ ಧೈರ್ಯ ಮಾಡಿದಳು. ತನ್ನವರನ್ನೆಲ್ಲ ಕೆಟ್ಟದಾಗಿ ದೂರುತ್ತ ಅತ್ತು ಇತರರ ಕರುಣೆ ಸಂಪಾದಿಸಿ, ಅವರನ್ನೂ ವಂಚಿಸಿ ಓಡುವ ಚತುರೆ ಅವಳು. ಹೀಗೆ ಮಿತಿ ಮೀರಿದ ಚಟಗಳಿಂದಾಗಿ ಸಿಕ್ಕುಹಾಕಿಕೊಂಡು ತಾನೆ ಜೈಲು ಕಂಡದ್ದಿದೆ.

ಯಾರನ್ನೋ ನಂಬಿಸಿ ಮದುವೆ ಆದಳು. ಬಸಿರು ತೆಗಿಸಿಕೊಂಡಳು, ಹೊಡೆದ ಎಂದು ದೂರಿದಳು. ಒಲ್ಲೆ ಹೋಗೆಂದಳು - ಹೋದವನನ್ನು ಬ್ಲ್ಯಾಕ್‌ಮೇಲ್ ಮಾಡಿ ಹಣ ಕಿತ್ತಳು. ಪ್ರತಿಭಟಿಸಿದಾಗ ಅವನನ್ನೇ ನೂಕಿದಳು-ಹೊಡೆದಳು. ಮುಂಗೈ ಕೊಯ್ದುಕೊಂಡು ಸತ್ತಂತೆ ಆಡಿದಳು. ನಿದ್ರೆ ಮಾತ್ರೆ ನುಂಗಿದಳು ಅಬ್ಬಾ ಇಷ್ಟು ಕ್ರೌರ್ಯ ಒಂದು ಹದಿಹರೆಯದ ಹುಡುಗಿಯ ಒಳಗೆ ಸಾಧ್ಯವೆ?

ಇವರಿಬ್ಬರ ಬಗ್ಗೆಯೂ ವೈದ್ಯರು ಹೇಳುವುದು ಮನೋರೋಗಿಗಳು ಎಂದೇ. ಇವು ಆಸ್ಪತ್ರೆ ಸೇರಿ ಚಿಕಿತ್ಸೆ ಪಡೆವಂಥ ಉಲ್ಬಣಗೊಂಡ ರೋಗಗಳಲ್ಲ. ಮೊದಲ ಪ್ರಸಂಗದಲ್ಲಿ ಹೇಳಿದ ತರುಣನ ದ್ವಿಮುಖ ವ್ಯಕ್ತಿತ್ವ, ಆಶ್ರಿತರನ್ನು ಹಿಂಸಿಸುವ ಪ್ರವೃತ್ತಿ ಒಂದು ಬಗೆಯ ಮನೋರೋಗವಾದರೆ ಇನ್ನೊಂದು ಪ್ರಸಂಗದಲ್ಲಿ ಬರುವ ಹುಡುಗಿಯ ಅತಿ ಎನಿಸಿದ ಸ್ವಭಾವಕ್ಕೆ ಕೂಡಾ ಮನೋರೋಗವೇ ಕಾರಣ.

ಇವರಿಬ್ಬರೂ ಸ್ಯಾಡಿಸ್ಟರಲ್ಲ. ಆದರೆ ಅದರ ಸಣ್ಣ ಎಳೆಯಂತೂ ಒಳಗೇ ವೃದ್ಧಿಸುತ್ತಿರುತ್ತದೆ. ಮೊದಲ ಪ್ರಸಂಗದ ಗಂಡನಿಗೆ ಸಂದೇಹ-ಅದರಿಂದ ಹಿಂಸೆ ಮತ್ತು ಎಲ್ಲರೂ ತನ್ನ ಅಸಹಾಯಕತೆಯನ್ನು ಹಂಗಿಸಿದಾಗ ತನ್ನ ಅಧೀನದವರನ್ನು ಹಿಂಸಿಸುವ ಸ್ವಭಾವ. ಅನೇಕ ಚಿಕ್ಕ ಮಕ್ಕಳಲ್ಲಿ, ಕೆಲವು ತಾಯಂದಿರಲ್ಲಿ ಸಹ ಈ ಗುಣ ಇರುತ್ತದೆ. ಎಲ್ಲರ ಮೇಲಿನ ಸಿಟ್ಟನ್ನು ತಾಯಿ ತನ್ನ ಮಗುವನ್ನು ಹೊಡೆದು ತೀರಿಸಿಕೊಳ್ಳುತ್ತಾಳೆ. ಈ ಗಂಡ ಹೆಂಡತಿಯನ್ನು ಹೊಡೆಯುವುದೂ ಹೀಗೇ. ಆದರೆ ಇವರು ಒಂದು ಕ್ಷಣವಾದರೂ ತಮ್ಮ ಈ ದೌರ್ಬಲ್ಯದ ಬಗ್ಗೆ ಯೋಚಿಸುತ್ತಾರೆಯೆ? ಇಲ್ಲ, ಆದರೆ ದೌರ್ಬಲ್ಯವನ್ನೇ ಗುಣವಾಗಿಸಿಕೊಂಡು ವೃದ್ಧಿಪಡಿಸಿಕೊಳ್ಳುತ್ತಾರೆ. ಅದು ಮಿತಿ ಮೀರಿದಾಗ ಪ್ರತಿಭಟಿಸಲಾಗದ ಅಧೀನ ವ್ಯಕ್ತಿಯ ಕೊಲೆಯಂಥ ಅಪರಾಧವನ್ನೂ ಮಾಡಬಹುದು. ಇಂಥವರ ಬಗ್ಗೆ ನೇರವಾಗಿ ದರ್ಪಿಷ್ಟನಾದ ಪುರುಷನ ಬಗ್ಗೆ ತೋರುವ ಎಚ್ಚರಕ್ಕಿಂತ ಹೆಚ್ಚಿನ ಎಚ್ಚರ ಇರಬೇಕು. ಎರಡನೇ ಪ್ರಸಂಗದ ಹುಡುಗಿಯಂಥವರೂ ಅಪಾಯಕಾರಿಗಳು. ಇಂಥವರು ವೈದ್ಯರ ಬಳಿ ಬರುವುದಿಲ್ಲ. ಭಾವತೀವ್ರತೆ ತಡೆದುಕೊಳ್ಳಲು ಕುಡಿಯುತ್ತಾರೆ, ಮಾದಕ ವಸ್ತು ಸೇವಿಸಬಹುದು. ಲೋಕದ ಗಂಡಸರೆಲ್ಲ ತನ್ನನ್ನು ಸುಂದರಿ ಎನ್ನಲಿ, ಪ್ರೀತಿಸಲಿ, ಸಂಬಂಧ ಮಾಡಲಿ ಎಂದು ಬಯಸುತ್ತಾರೆ. ಹಾಗೆ ಆಗದೇ ಹೋದಾಗ ತಮ್ಮನ್ನು ತಾವೇ ಕೊಂದುಕೊಳ್ಳುವ ಪ್ರಯತ್ನ ಮಾಡುತ್ತಾರೆ.

ಮೇಲೆ ಹೇಳಿದ ಪ್ರಸಂಗದಲ್ಲಿ ಆ ಹುಡುಗಿ ಮುಂಗೈಯನ್ನು ಕುಯ್ದುಕೊಂಡು, ನಿದ್ರೆ ಮಾತ್ರೆ ನುಂಗಿ ಹೀಗೆ ಹಲವು ಬಾರಿ ಆತ್ಮಹತ್ಯೆಗೆ ಪ್ರಯತ್ನಿಸಿದ್ದಾಳೆ. ಅನೇಕ ಸಂದರ್ಭಗಳಲ್ಲಿ ಮಹಿಳಾ ಪರ ಹೋರಾಟ ನಡೆಸುವ ಸಂಘಟನೆಗಳಿಗೆ ಬರುವ ದೂರುಗಳಲ್ಲಿ ಇಂಥ ಅತಿರೇಕ-ವಿಕ್ಷಿಪ್ತ ಎನ್ನುವಂಥ ಜನರ ಸಮಸ್ಯೆಗಳೂ ಇವೆ. ಈಚೆಗೆ ಇಂಥವರು ಹೆಚ್ಚುತ್ತಿದ್ದಾರೆ ಕೂಡಾ. ಇಂಥವರನ್ನು ಬೆಂಬಲಿಸಿ ನ್ಯಾಯಕ್ಕಾಗಿ ಹೋರಾಟ ಮಾಡುವಾಗಿನ ನಮ್ಮ ವಿಧಾನಗಳೆಲ್ಲ ಬೇರೆಯಾಗ ಬೇಕಾಗುತ್ತದೆ. ಆದರೆ ಇಂಥವು ಕೂಡಾ ಪರಿಹಾರವಾಗಬೇಕಾದಂಥ ಸಮಸ್ಯೆಗಳು. ಮನೋರೋಗ ಎಂಬ ಒಂದೇ ಕಾರಣಕ್ಕೆ ನಿರ್ಲಕ್ಷ್ಯ ಸಲ್ಲ. ಇದನ್ನೇ ಕಾರಣವಾಗಿಸಿ ಕೊಂಡು ಅನ್ಯಾಯ ಮಾಡುವವರಿದ್ದಾರೆ. ಇಂಥಲ್ಲಿ ಒಂದು ವ್ಯವಸ್ಥಿತ ವಿಧಾನವನ್ನು ಅವರಿಗೆ ನೆರವಾಗ ಬಯಸುವವರು ಅನುಸರಿಸಬೇಕಾಗುತ್ತದೆ. ಅದಕ್ಕೆ ಸಿದ್ಧರಾಗ ಬೇಕಾಗಿದೆ. ಅದು ಎಂಥ ಸಿದ್ಧತೆ ಎಂಬುದು ಬಹಳ ಮುಖ್ಯವಾದ ಸಂಗತಿ.

'ಮಾನಸಿ'

**ಚಂದಾ ನವೀಕರಣದ ಸೂಚನೆ ದೊರೆತ ಕೂಡಲೆ ಚಂದಾ ನವೀಕರಿಸಿ ಸಹಕರಿಸಿ.**

## ಓದುಗರ ವಿಭಾಗ

ಮಾನಸ ದುಡಿಯುವ ಮಹಿಳೆಯರ ಧ್ವನಿಯಾಗಬೇಕು ಅವರ ಮುಖವಾಣಿಯಾಗಿ ಹೊರ ಹೊಮ್ಮಬೇಕು. ಅವರ ನೋವಿಗೆ ಮಿಡಿವ ಮಿತ್ರೆಯಾಗಬೇಕು. ಈ ದಿಸೆಯಲ್ಲಿ ಕೂಡ ಸಂಪಾದಕ ಮಂಡಲಿ ಆಲೋಚಿಸಬೇಕೆಂದು ಕೋರುವೆ. ದುಡಿಯುವ ಮಹಿಳೆಯರೆಲ್ಲ 'ಮಾನಸ'ದ ಚಂದಾದಾರರಾದರೆ ಪತ್ರಿಕೆಗೆ ಆರ್ಥಿಕ ಶಕ್ತಿ ಬರಬಹುದೆಂಬ ನಂಬಿಕೆ ನನ್ನದು.

'ಅಸಹಜ ಸಾವುಗಳ' ಕುರಿತು ನೀಡಿರುವ ಅಧ್ಯಯನ ವರದಿ ಅತ್ಯಂತ ಉಪಯುಕ್ತ. ಇಂತಹ ವಿಚಾರಗಳು ದಿನ ಪತ್ರಿಕೆಗಳ, ನಿಯತಕಾಲಿಕೆಗಳ ಮೂಲಕ ಎಲ್ಲಾ ಜನರಿಗೂ ತಲುಪಬೇಕು. ಸದರಿ ವರದಿಯಲ್ಲಿ ನೀಡಲಾಗಿರುವ ಹಲವಾರು ಸಲಹೆಗಳು ಅಮೂಲ್ಯವಾದವು. ಎಲ್ಲ ಹಂತದಲ್ಲಿ ಬರುವ ಅಧಿಕಾರಿಗಳು, ವ್ಯಕ್ತಿಗಳು ತಮ್ಮ ತಮ್ಮ ಕೆಲಸಗಳನ್ನು ಪ್ರಾಮಾಣಿಕತೆಯಿಂದ ನಿರ್ವಹಿಸಿದರೆ ಸಾಕು, ಎಷ್ಟೋ ಬದಲಾವಣೆ ಸಾಧ್ಯ. ಭ್ರಷ್ಟ ವ್ಯವಸ್ಥೆಯ ಕರಾಳ ಸ್ಥಿತಿಯಲ್ಲಿ ಯಾವುದೇ ಎಷ್ಟೇ ಕಾನೂನು, ಏನೇ ವ್ಯವಸ್ಥೆ ಮಾಡಿದರೂ ಉದ್ದೇಶ ಸಫಲವಾಗುವುದಿಲ್ಲ. ಸಿ.ಓ.ಡಿ. ಕೂಡ ಇವತ್ತು ಕಾರ್ಯ ಒತ್ತಡಗಳಿಂದಾಗಿ ನಿರೀಕ್ಷಿತ ಯಶಸ್ಸು ನೀಡುತ್ತಿಲ್ಲ. ಸಿಓಡಿ ಬಗ್ಗೆ ನಂಬಿಕೆಯೂ ಕಡಿಮೆಯಾಗುತ್ತಿದೆ. ವರದಕ್ಷಿಣೆ ಕಿರುಕುಳ ಹಾಗೂ ಸಾವುಗಳನ್ನು ಕುರಿತಂತೆ ಇಂದು ಪ್ರತ್ಯೇಕ ವ್ಯವಸ್ಥೆಯೇ ಬೇಕಾಗಿದೆ.

ಮೇಲುನೋಟಕ್ಕೆ ಕೊಲೆ ಎಂದು ಕಂಡಕೂಡಲೇ ಸಂಬಂಧಿಸಿದವರಿಗೆ ಯಾವುದೇ ಕಾರಣಕ್ಕೂ ಬಿಡುಗಡೆ ಮಾಡಬಾರದು ಅವರ ಅನುಪಸ್ಥಿತಿಯಲ್ಲಿ ಪ್ರಾಥಮಿಕ (ವಿಚಾರಣೆ) ತನಿಖೆಯಾಗಬೇಕು. ಕಡೆಯ ಪಕ್ಷ ರಾಜ್ಯಮಟ್ಟದಲ್ಲಿ ಇದಕ್ಕೇ ಒಂದು ಪ್ರತ್ಯೇಕ ಆಸ್ಪತ್ರೆ, ಫೊರೆನ್ಸಿಕ್ ವಿಭಾಗ, ಪೊಲೀಸ್ ವ್ಯವಸ್ಥೆ, ನ್ಯಾಯಾಲಯ ಇದ್ದು ಶೀಘ್ರವಾಗಿ ಪ್ರಕರಣ ಇತ್ಯರ್ಥವಾಗಬೇಕು.

ಸಿ. ಎನ್. ಜಯಲಕ್ಷ್ಮಿದೇವಿಯವರ ಬಗ್ಗೆ ಸಮತಾ ಒಂದು ಪುಸ್ತಕ ಹೊರತಂದಿರುವ ಕುರಿತು ವಿಶ್ಲೇಷಣೆ ಕೂಡ ಗಮನಾರ್ಹ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸುವ ಪುಸ್ತಕಗಳು ಬಹುತೇಕ ಪುರುಷರು ಬರೆದದ್ದು ಅಥವಾ ಪುರುಷರನ್ನು ಕುರಿತಾಗಿದ್ದವೇ ಆಗಿರುತ್ತವೆ. ಹಿರಿಯ ಲೇಖಕಿಯರ ಕೃತಿಗಳನ್ನು ಪ್ರಕಟಿಸುವಂತೆ ಒತ್ತಾಯಿಸಬೇಕು.

ಹರೀಶ್ ಕಾರ್ತೀಕನನ್ನು ಮಹಿಳೆಯರು ಹೊಡೆದು ಸಾಯಿಸಿದ ವಿಚಾರ ಕಾನೂನು ಬದ್ಧವಲ್ಲದಿದ್ದರೂ ಅಭಿನಂದನೀಯ. ಎಲ್ಲ ವ್ಯವಸ್ಥೆಗಳು ನಿಷ್ಕ್ರಿಯಗೊಂಡಾಗ, ಉದ್ದೇಶಪೂರ್ವಕವಾಗಿ ಮಹಿಳೆಯರ ಪರವಾಗಿ ನ್ಯಾಯ ನಿರಾಕರಣೆಯಾದಾಗ, ಕಾನೂನಿನ ರಕ್ಷಣೆ ದೊರಕದಿದ್ದಾಗ ತಮ್ಮದೇ ಆದ ಕಾನೂನನ್ನು ಕೈಗೆತ್ತಿಕೊಂಡಿದ್ದು ಸರಿ. ಬಹುಶಃ ಎಲ್ಲೆಡೆ ಇಂತಹವು ನಡೆದಾಗ ಕಾನೂನು ವ್ಯವಸ್ಥೆ ಸರಿಹೋಗ ಬಹುದೇನೋ.

ಆದಿವಾಸಿ ಜನಾಂಗದ ಬಗ್ಗೆ ಮಹಾಶ್ವೇತಾದೇವಿಯವರು ಬರೆದ ಲೇಖನ ನೋಡಿದಾಗ ವಿಶ್ವಮಟ್ಟದ ಆಲೋಚನೆ ಯಲ್ಲಿರುವ, 21ನೇ ಶತಮಾನಕ್ಕೆ ಕಾಲಿಡಲು ಸಜ್ಜಾಗಿರುವ ನಾವು ಇನ್ನೂ ಎಲ್ಲಿದ್ದೇವೆ ಎಂಬುದನ್ನು ನೆನೆದಾಗ ಅವಮಾನ ಮತ್ತು ನಾಚಿಕೆಗೇಡು ಅನ್ನಿಸುತ್ತದೆ.

ಇಂತಹ ವಿಭಿನ್ನ ರೀತಿಯ ಬರಹಗಳ ಮೂಲಕ ಗಮನ ಸೆಳೆಯುವ ಮಾನಸ ಇನ್ನಷ್ಟು ಶಕ್ತಿಶಾಲಿಯಾಗಿ ಹೊರಬರಲಿ ಎಂದು ಹಾರೈಸುತ್ತೇನೆ.

**ಬಾ. ಹ. ರಮಾಕುಮಾರಿ**
ತುಮಕೂರು

★ ★ ★

ತಾವು ಕಳಿಸಿರುವ ಕೆಲವು ತಮ್ಮ "ಮಾನಸ" ಪತ್ರಿಕೆಗಳು ನನ್ನ ಕೈ ಸೇರಿತು. ಪತ್ರಿಕೆಯ ಪುಟಗಳನ್ನು ಒಂದೊಂದು ತಿರುವು ಹಾಕುತ್ತ ಹೋದಂತೆ ಇಂದು ನಾಡಿನಲ್ಲಿ ಸ್ತ್ರೀಯರ ಬಗ್ಗೆ ಹೆಚ್ಚಿನ ಒತ್ತು ಕೊಟ್ಟು, ಅವರ ಬಗ್ಗೆ ಬಹಳ ಉಪಯುಕ್ತವಾದ ಮಾಹಿತಿ ಒಳಗೊಂಡ ತಮ್ಮ ಪತ್ರಿಕೆಯ ಸಾಧನೆ ನಿಜಕ್ಕೂ ಶ್ಲಾಘನೀಯ ವಾದದ್ದು. ಒಟ್ಟಿನಲ್ಲಿ ತಮ್ಮ ಪತ್ರಿಕೆಯ ಬೆಳಗಕ್ಕೆ ಅಭಿನಂದನೆಗಳು.

**ವಿ. ಎಸ್. ಶಿವಪ್ಪಯ್ಯನಮಠ**

★ ★ ★

ಬಾ.ಜ.ಪ.ಮು.ಮುಂ. ಶೇಖಾವತರವರ ಪಕ್ಷಪಾತತನದ ಅಕೃತ್ಯಗಳ ವರದಿ ದಿಟ್ಟ ಸಂಪಾದಕೀಯವಾಗಿದೆ. ಧಾರ್ಮಿಕ ರಕ್ಷಣೆ ಅಂಧಶ್ರದ್ಧೆಯಾಗಿದೆ, ಮಹಿಳೆಯರ ಶೋಷಣೆಯಾಗಿದೆ ಎನ್ನುವ ಸುದ್ದಿ ಕಹಿ ಸತ್ಯವಾಗಿದೆ. ಹೋರಾಟಗಾರರ ಪರಿಚಯ ಅಪರೂಪದ ಮಾಹಿತಿ.

**ನರಸಿಂಹಗುಪ್ತ, ಬಳಿಚಕ್ರ**

## ರಾಷ್ಟ್ರೀಯ ಮಹಿಳಾ ಆಯೋಗದ ಸಾಧನೆಯ ಕುರಿತು ಚರ್ಚೆ

ರಾಷ್ಟ್ರೀಯ ಮಹಿಳಾ ಆಯೋಗದ ಸಾಧನೆಗಳನ್ನು ಕುರಿತು ನಡೆಸಲಾದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಾತನಾಡುತ್ತಾ, ಮಾಜಿ ಕೇಂದ್ರ ಸಚಿವೆ ಮಾರ್ಗರೆಟ್ ಆಳ್ವ "ಆಯೋಗವನ್ನು ಅಧಿಕಾರಿಶಾಹಿಯ ನಿಯಂತ್ರಣದಿಂದ ಹೊರಗೆಳೆದು ತರಬೇಕಾಗಿದೆ; ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಸ್ವಾಯತ್ತತೆಯನ್ನು ಆಯೋಗಕ್ಕೆ ಒದಗಿಸಬೇಕಾಗಿದೆ; ಆಗಲೇ ಆಯೋಗದಿಂದ ಅಭೂತಪೂರ್ವವಾದುದನ್ನು ನಿರೀಕ್ಷಿಸಲು ಸಾಧ್ಯ " ಎಂದು ಹೇಳಿದ್ದಾರೆ.

ಸ್ವಯಂಸೇವಾ ಸಂಘಟನೆಗಳ ಪ್ರತಿನಿಧಿಗಳು ಭಾಗವಹಿಸಿದ್ದ ಈ ವಿಚಾರ ಸಂಕಿರಣದಲ್ಲಿ ರಾಷ್ಟ್ರೀಯ ಮಹಿಳಾ ಆಯೋಗದ ಅಧ್ಯಕ್ಷೆ ಮತ್ತು ಇತರ ಸದಸ್ಯರನ್ನು ನೇಮಕಾತಿ ಮಾಡುವ ವಿಚಾರದಲ್ಲಿ ಕೇಂದ್ರ ಸರ್ಕಾರವು ಹೆಚ್ಚಿನ ಪಾರದರ್ಶಕತೆಯನ್ನು ಹೊಂದಿರಬೇಕೆಂದು ಆಗ್ರಹ ಪಡಿಸಲಾಯಿತು. ಸುಪ್ರೀಂ ಕೋರ್ಟಿನ ಮಾಜಿ ನ್ಯಾಯಾಧೀಶ ಹಾಗೂ ಪ್ರಸ್ತುತ ಕಾನೂನು ಆಯೋಗದ ಸದಸ್ಯರಾದ ನ್ಯಾ. ಲೈಲಾ ಸೇಠ್ ಅವರು "ರಾಷ್ಟ್ರೀಯ ಮಹಿಳಾ ಆಯೋಗ ತನಗೆ ಬೇಕಾದ ಅಧಿಕಾರಿ ವರ್ಗವನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿರಬೇಕು; ಅದಕ್ಕೆ ಆರ್ಥಿಕ ನಿರ್ಬಂಧಗಳನ್ನೂ ಸಡಿಲಿಸಬೇಕು" ಎಂದು ಅಭಿಪ್ರಾಯಪಟ್ಟರು.

ವಿಚಾರ ಸಂಕಿರಣದಲ್ಲಿ ಮುಖ್ಯ ಅತಿಥಿಯಾಗಿದ್ದ ಶ್ರೀಮತಿ ಸುಮನ್ ಕೃಷ್ಣಕಾಂತ್ ಅವರು "ಮಹಿಳೆಯರ ಮೇಲಿನ ದೌರ್ಜನ್ಯಗಳ ವಿರುದ್ಧ ಸಂಘಟಿತ ಹಾಗೂ ನಿರಂತರ ಹೋರಾಟಗಳನ್ನು ರೂಪಿಸುವ ಅಗತ್ಯವಿದೆ" ಎಂದರು.

"ರಾಷ್ಟ್ರೀಯ ಮಹಿಳಾ ಆಯೋಗ ಇದುವರೆಗೆ ಸಲ್ಲಿಸಿರುವ ವರದಿಗಳ ಬಗ್ಗೆ ಲೋಕಸಭೆ ಮತ್ತು ರಾಜ್ಯಸಭೆಗಳಲ್ಲಿ ಚರ್ಚೆ ನಡೆದಿಲ್ಲ; ಇದಕ್ಕೆ ಅವಕಾಶವನ್ನೇ ಇನ್ನೂತನಕ ಕಲ್ಪಿಸಲಾಗಿಲ್ಲ. ಆಯೋಗದ ವರದಿಗಳು ಧೂಳು ಹಿಡಿಯುತ್ತಾ ಬಿದ್ದಿರುವುದು ನಾಚಿಕೆಗೇಡು" ಎಂದು ಮಹಿಳಾ ದಕ್ಷತಾ ಸಮಿತಿಯ ರಂಜನಾ ಕುಮಾರಿ ಆಕ್ರೋಶ ವ್ಯಕ್ತಪಡಿಸಿದರು.

ರಾಷ್ಟ್ರೀಯ ಮಹಿಳಾ ಆಯೋಗದ ಅಧ್ಯಕ್ಷೆ ಮತ್ತು ಸದಸ್ಯರನ್ನು ಆಯ್ಕೆ ಮಾಡಲು ಪ್ರತ್ಯೇಕವಾದ ಮತದಾರರ ಪಟ್ಟಿಯೊಂದನ್ನು ಸಿದ್ಧಪಡಿಸುವ ಕಾರ್ಯ ಆಗಬೇಕು; ಆಯೋಗದ ಸದಸ್ಯ - ಕಾರ್ಯದರ್ಶಿ ಸ್ಥಾನಕ್ಕೆ ಸರ್ಕಾರಿ ಅಧಿಕಾರಿಯನ್ನು ನೇಮಿಸುವ ಬದಲು, ಸಕ್ರಿಯ ಮಹಿಳಾ ಸಂಘಟನೆಯ ಪದಾಧಿಕಾರಿಯೊಬ್ಬರನ್ನು ನೇಮಕ ಮಾಡಬೇಕು ಎಂಬಿತ್ಯಾದಿ ಸಲಹೆಗಳೂ ವಿಚಾರ ಸಂಕಿರಣದಲ್ಲಿ ಮೂಡಿ ಬಂದವು.

*    *    *

## ಯಾರು ಬಾಧ್ಯರು?

ರೈಲು ನಿಲ್ದಾಣದ ವೇಟಿಂಗ್ ರೂಂನಲ್ಲಿ ಪ್ರಯಾಣಿಕಳಾಗಿ ತಂಗುವ ಮಹಿಳೆಯ ಸುರಕ್ಷಿತತೆಯನ್ನು ಯಾರು ನೋಡಿಕೊಳ್ಳುವ ಬಾಧ್ಯರು ಯಾರು?

ಕಲ್ಕತ್ತಾ ಹೈಕೋರ್ಟು ಕಳೆದ ಜೂನ್ 26ರಂದು ನೀಡಿದ ತೀರ್ಪನ್ನು ಗಮನಿಸಿದರೆ, ಮಹಿಳಾ ಸುರಕ್ಷಿತತೆಗೆ ರೈಲ್ವೆ ಇಲಾಖೆಯೇ ಸಂಪೂರ್ಣವಾಗಿ ಬಾಧ್ಯ ಎನ್ನಬೇಕಾಗುತ್ತದೆ.

ಈಶಾನ್ಯ ರೈಲ್ವೆಯ ಯಾತ್ರಿನಿವಾಸ್‌ನಲ್ಲಿ ತಂಗಿದ್ದ ಮಹಿಳೆಯೊಬ್ಬರ ಮೇಲೆ ಇಲಾಖೆಯ ನೌಕರರು ಸಾಮೂಹಿಕ ಅತ್ಯಾಚಾರ ಮಾಡಿದ ಪ್ರಕರಣದಲ್ಲಿ ತೀರ್ಪು ನೀಡಿದ ಹೈಕೋರ್ಟು, ಈಶಾನ್ಯ ರೈಲ್ವೆ ಈ ಸಂಬಂಧದಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆಗೆ 10 ಲಕ್ಷ ರೂ.ಗಳನ್ನು ಎರಡು ತಿಂಗಳೊಳಗೆ ಪರಿಹಾರವಾಗಿ ನೀಡಬೇಕೆಂದು ಆದೇಶಿಸಿದೆ.

ಮುಖ್ಯ ನ್ಯಾಯಾಧೀಶ ಪಿ. ಎಸ್. ಮಿಶ್ರಾ ಮತ್ತು ನ್ಯಾ. ಬರಿನ್ ಘೋಷ್ ಅವರ ನ್ಯಾಯಪೀಠವು, ನ್ಯಾಯದಾನದ ಸಮಯದಲ್ಲಿ ಹಾಜರಿದ್ದ ಮಹಿಳೆಯ ಹೇಳಿಕೆಯನ್ನು ಪಡೆದುಕೊಂಡು, ಮೇಲ್ಕಂಡ ಅಪೂರ್ವವಾದ ತೀರ್ಪನ್ನು ನೀಡಿದರು.

*ಸಂಗ್ರಹ : ಶಾರದ ಬಿ. ಎನ್.*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ**

ಸಂ. ಮಂಡಳಿ

REGD No. KRNA 271

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067